# ಬೈರಾಪುರದ ಮರಿಸ್ವಾಮಿ ಜಾನಪದ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)


ಸಂಶೋಧಕರು

ಮೇಘನಾಥ ಎ.ಕೆ.ಎಸ್.

ಮಾರ್ಗದರ್ಶಕರು

ಡಾ. ಸ.ಚಿ.ರಮೇಶ್

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.





ಸಮಾಜ ವಿಜ್ಞಾನಗಳ ನಿಕಾಯ

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩, ೨೭೬

೨೦೦೭

# ಭೈರಾಪುರದ ಮರಿಸ್ವಾಮಿ ಜಾನಪದ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)

ಸಂಶೋಧಕರು
ಮೇಘನಾಥ ಎ.ಕೆ.ಎನ್



ಮಾರ್ಗದರ್ಶಕರು
ಡಾ. ಸ.ಚಿ.ರಮೇಶ್
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಸಮಾಜ ವಿಜ್ಞಾನ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೦೭

# ದೃಢೀಕರಣ ಪತ್ರ

"ಭೈರಾಪುರದ ಮರಿಸ್ವಾಮಿ ಜಾನಪದ ಅಧ್ಯಯನ" ಎಂಬ ಕಿರುಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್ ಪದವಿಗಾಗಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಕಿರುಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ.ಸ.ಚಿ.ರಮೇಶ್)

ಡಾ ಸ ಚಿ ರಮೇಶ್
ಪ್ರಾಧ್ಯಾಪಕರು-ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 30/7/07

# ಪ್ರಮಾಣ ಪತ್ರ

**"ಭೈರಾಪುರದ ಮರಿಸ್ವಾಮಿ ಜಾನಪದ ಅಧ್ಯಯನ"** ಎಂಬ ಕಿರು ಪ್ರಬಂಧವನ್ನು ಡಾ. ಸ.ಚಿ.ರಮೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಾದರಪಡಿಸಿದ್ದೇನೆ. ಪ್ರಸ್ತುತ ಕಿರುಪ್ರಬಂಧದ ಯಾವುದೇ ಭಾಗವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ:

(ಮೇಘನಾಥ ಎ.ಕೆ.ಎನ್)

## ಪರಿವಿಡಿ

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಾನಪದ ಬಗೆಗಿನ ಪರಿಕಲ್ಪನೆಗಳು ಇಂದು ಬಹಳಷ್ಟು ಬದಲಾಗಿವೆ. ಜಾನಪದವೆಂದರೆ ಜನಪದಗೀತೆ, ಕಥೆ ಅಷ್ಟೇ ಎಂಬ ಮನೋಭಾವ ಹೋಗಿ ಜಾನಪದದ ಎಲ್ಲಾ ಅಂಗ, ಉಪಾಂಗಗಳನ್ನು ಅದರ ಸಂಕೀರ್ಣತೆಯೊಂದಿಗೆ ಅಧ್ಯಯನ ಮಾಡಬೇಕೆಂಬ ಪ್ರವೃತ್ತಿ ಇಂದು ವಿಶೇಷವಾಗಿ ಕಂಡು ಬರುತ್ತಿದೆ. ಅಷ್ಟೇ ಅಲ್ಲ, ಜಾನಪದ ಕೇವಲ ಹಳ್ಳಿಗಳಲ್ಲಿ ಮಾತ್ರವಲ್ಲದೆ ನಗರದಲ್ಲೂ ಇದೆ.

ಮಾನವ ತನ್ನ ಬೆಳವಣಿಗೆಯ ಪ್ರಾರಂಭದ ದಿನಗಳಲ್ಲಿ ಆಚರಿಸುತ್ತಿದ್ದ ಆಚರಣೆಗಳೆಲ್ಲ ಧಾರ್ಮಿಕ ಭಾವನೆಯ ಪ್ರೇರಕವಾಗಿತ್ತು, ಹಿನ್ನೆಲೆಯಾಗಿತ್ತು. ಮಾನವನ ಮನಸ್ಸು ಪಕ್ವಗೊಂಡಂತೆಲ್ಲಾ ಧರ್ಮದ ಬಗೆಗಿನ ಭಾವನೆಗಳು ನಾನಾ ರೀತಿಯಾಗಿ ರೂಪಗೊಂಡವು. ಪ್ರಕೃತಿಯಲ್ಲಿ ಕಾಣಿಸಿಕೊಳ್ಳುವ ಮಳೆ, ಗುಡುಗು, ಸಿಡಿಲು, ಮಿಂಚು ಇವುಗಳ ಆರ್ಭಟಗಳ ಬೆಳಕಿನಲ್ಲಿ ಕಾಣದ ಶಕ್ತಿಯ ಕೈವಾಡವಿದೆ ಎಂದು ಭಾವಿಸಿದ. ಅಂಥ ಅಗೋಚರವಾದ ಶಕ್ತಿಯನ್ನು ಪೂಜಿಸುತ್ತಾ ಬಂದ. ಕಲ್ಲು, ಮರ, ಭೂಮಿ-ಆಕಾಶ, ಸೂರ್ಯ-ಚಂದ್ರ ಮುಂತಾದವುಗಳಲ್ಲಿ ದೈವತ್ವದ ಅಂಶವನ್ನು ಕಂಡುಕೊಳ್ಳುತ್ತಾ ಬಂದ. ಅಂದಿನಿಂದ ಇಂದಿನವರೆಗೂ ಮಾನವ ತಿಳಿಯದೆಯೋ ಹಲವಾರು ಆಚರಣೆಗಳನ್ನು ಮಾಡುತ್ತಲೇ ಬಂದಿದ್ದಾನೆ. ಹೀಗೆ ಆಚರಣೆಗೆ ಬಂದ ಆರಾಧನೆ ಕುಟುಂಬಗಳಿಗೆ ಮೀಸಲಾಗಿತ್ತು. ಜನಸಂಖ್ಯೆ, ಬುದ್ಧಿವಿಕಾಸ, ನಾಗರೀಕತೆ ಬೆಳೆದಂತೆ ಆರಾಧನೆ

ಕುಟುಂಬದ ಚೌಕಟ್ಟನ್ನು ಮೀರಿ ಸಮಾಜವನ್ನು ಸೇರಿತು. ಬರಬರುತ್ತಾ ಇದರ ವ್ಯಾಪ್ತಿ ಗ್ರಾಮದಿಂದ ನಗರಕ್ಕೆ ನಿಯಮಿತತನ ಪಡೆದು ಆರಾಧನೆಯೇ (ಆಚರಣೆಗಳು) ಜಾತ್ರೆಗಳಿಗೆ ಕಾರಣವಾಯಿತು. ಆರಾಧನೆ ಪದಕ್ಕೆ ಸೇವೆ, ಪೂಜೆ ಎಂಬ ಅರ್ಥಗಳಿವೆ. ಜಾತ್ರೆ ಇವುಗಳನ್ನು ಒಳಗೊಂಡಿರುತ್ತದೆ. ಆರಾಧನೆಗೆ ಜಾತ್ರೆ, ಜಾತ್ರೆಗೆ ಆರಾದನೆ ಪೂರಕವಾಗಿರುತ್ತದೆ. ಇವೆರಡರ ಸ್ವರೂಪದಲ್ಲಿ ವ್ಯತ್ಯಾಸ ಕಂಡುಬಂದರೂ ಉದ್ದೇಶ ಮಾತ್ರ ಒಂದೇ ಆಗಿರುತ್ತದೆ.

ಆದರೆ ಜಾತ್ರೆಗಳ ಉಗಮವನ್ನು ನಿಖರವಾಗಿ ಹೇಳುವುದು ಕಷ್ಟವಾದರೂ ಸ್ಥೂಲವಾಗಿ ಆರಂಭದಲ್ಲಿ ಆರಾಧನೆ ಅನಂತರ ಜಾತ್ರೆಗಳು ಎನ್ನಬಹುದು. ಜಾತ್ರೆ ಹಲವಾರು ದೃಷ್ಟಿಯಿಂದ ಹಳ್ಳಿಗರ ಜೀವನದಲ್ಲಿ ಮಹತ್ವದ ಪಾತ್ರವಹಿಸಿದೆ. ಎಲ್ಲಾ ಸಮುದಾಯದವರನ್ನು ರಂಜಿಸುವ ನಮ್ಮ ಬದುಕಿನ ಒಂದು ಸಂಕೀರ್ಣ ಮತ್ತು ಸಾಮಾಜಿಕ, ಧಾರ್ಮಿಕ ಸಂಗತಿಗಳಿಂದ ಸಮನ್ವಿತವಾದ ಸಾಂಸ್ಕೃತಿಕ ಮೊತ್ತವಾಗಿದೆ. ಎಲ್ಲಾ ಜಾತಿ, ಸಮುದಾಯದವರು ಉತ್ಸವದಲ್ಲಿ ಭಾವೈಕ್ಯತೆಯಿಂದ ಭಾಗವಹಿಸುತ್ತಾರೆ. ಹಾಗೂ ಜನಪದ ರಂಗಕಲೆಗಳು ಸಹ ಪ್ರದರ್ಶನಗೊಳ್ಳುತ್ತವೆ. ಪ್ರತಿಯೊಂದು ಜಾತ್ರೆ ಆಯಾ ಧರ್ಮದ ಮತ-ತತ್ವಗಳ ಪ್ರಸಾರಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ಸಂಸ್ಕೃತಿ, ಸಾಹಿತ್ಯ ವಿವಿಧ ವಿದ್ವಾಂಸರಿಂದ ಪ್ರವಾಚಕಗೊಳಿಸುತ್ತಾರೆ. ಭಾವೈಕ್ಯತೆ ಮತ್ತು ಸಂಸ್ಕೃತಿಯ ಪರಿಸರವೂ ಆಗುತ್ತದೆ. ನಮ್ಮಯ ಸಂಪತ್ತು, ಜಾತ್ರೆ ಎಲ್ಲರ ಕ್ಷೇಮಾಭಿವೃದ್ಧಿಗಾಗಿ ಒಂದು ನಿಗದಿತವಾದ ಸಮಯದಲ್ಲಿ ದೇವರುಗಳ ಹೆಸರಿನಲ್ಲಿ ಧಾರ್ಮಿಕ ಕ್ಷೇತ್ರವೊಂದರಲ್ಲಿ ಸಾಮೂಹಿಕವಾಗಿ ಆಚರಿಸುವ ಧಾರ್ಮಿಕ ವಿಧಿಯಾಗಿ ಇಂದು ರೂಢಿಯಲ್ಲಿದೆ. ಇದು ಅನೇಕ ಜಾನಪದ ಅಂಶಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಒಂದು ಸಂಕೀರ್ಣ ವ್ಯವಸ್ಥೆಯಾಗಿದೆ. ಗ್ರಾಮದಿಂದ ನಗರದವರೆಗೆ ಜಾತ್ರೋತ್ಸವವೊಂದು ಪುಣ್ಯಪ್ರಸಂಗವಾಗಿದೆ. ಎಲ್ಲರೊಂದಿಗೆ ಕೂಡಿ ಮಾಡುವ ಹಬ್ಬವಾಗಿದೆ. ಸಾಮಾಜಿಕ ಜನಜೀವನದ ವ್ಯವಸ್ಥೆ ಸುರಕ್ಷಿತವಾಗಿ ಮಿನ್ನೆಡೆಸಲು ಮತ್ತು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದ ಸಂಸ್ಕೃತಿಯ ಪ್ರವಾಹವನ್ನು ಮುಂದುವರೆಸುವುದೇ ಆಗಿದೆ.

ಜಾತ್ರೆಯಿಂದ ಪ್ರತಿಯೊಬ್ಬನ ಮನಸ್ಸನ್ನು ಹಗುರಮಾಡಿಕೊಳ್ಳಲು ಮತ್ತು ತಮ್ಮದುಡಿಮೆಯ ದವಡೆಯಿಂದ ಅಲ್ಪ ವಿರಾಮ ಪಡೆದುಕೊಳ್ಳಲು ಈ ಜಾತ್ರೆಗಳನ್ನು ಆಚರಿಸುತ್ತಾರೆ. ಜಾತ್ರೆಗಳು ದೇವ-ದೇವತೆಗಳ ಸಂಪ್ರೀತಿಗಾಗಿಯೇ ಹುತಾತ್ಮರ ಗೌರವಾರ್ಥವಾಗಿಯೋ, ಸಮಾಜ ಸುಧಾರಣೆಗಾಗಿಯೋ, ಜರುಗಿ ಆ ನೆಪದಲ್ಲಿ ಧಾರ್ಮಿಕ, ಆರ್ಥಿಕ, ಸಾಮಾಜಿಕ, ತಾತ್ವಿಕ, ಮತ್ತು ರಾಜಕೀಯ ಸಂಘಟನೆಗೆ ವ್ಯಷ್ಟಿ ಹಾಗೂ ಸಮಷ್ಟಿ ಹಿತಗಳನ್ನು ಏಕಕಾಲದಲ್ಲಿ ಸಾಧಿಸುತ್ತದೆ. ಜಾನಪದ ಅಧ್ಯಯನವು ಮೊದಲ ಸಂಗ್ರಹ ರೂಪದಲ್ಲಿ ಮಾತ್ರ ತನ್ನ ವ್ಯಾಪ್ತಿಯನ್ನು ಹೊಂದಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ವೈಜ್ಞಾನಿಕವಾಗಿ, ಶಾಸ್ತ್ರೀಯಬದ್ಧವಾಗಿ ಗ್ರಾಮ, ಜಾತ್ರೆ, ಆಚರಣೆ, ಜನಾಂಗ, ಹಬ್ಬ, ಮತ್ತು ಸಂಪ್ರದಾಯಗಳ ಅಧ್ಯಯನಗಳು ನಡೆಯುತ್ತಿದೆ. ಕೇವಲ ಕಥೆ, ಗಾದೆ, ಒಗಟು, ಸಂಗೀತಗಳ ಮೂಲಕ ಸಂಸ್ಕೃತಿಯನ್ನು ಕಟ್ಟಿಕೊಡುವ ಪ್ರಯತ್ನಗಳನ್ನು ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಜಾನಪದದ ಪ್ರತಿಯೊಂದು ಅಂಶಗಳನ್ನಿಟ್ಟುಕೊಂಡು ಅಧ್ಯಯನ ಮಾಡುತ್ತಿದ್ದಾರೆ.

ಗ್ರಾಮೀಣ ಪ್ರದೇಶಗಳಲ್ಲಿ ಕಂಡು ಬರುವ ಆಕರಗಳನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಪುನರಚಿಸುವುದು ಇಂದು ಅನಿವಾರ್ಯವಾಗಿದೆ. ಇಂದಿನ ಜಗತ್ತಿನ ಎಲ್ಲಾ ವಿಧಿ ವಿಧಾನಗಳು ಆಧುನಿಕರಣದ ಪ್ರಭಾವಕ್ಕೊಳಗಾಗಿ ವಿವಿಧ ರೀತಿಯ ಪ್ರಕ್ರಿಯೆಗಳಿಂದ ಹಾಗೂ ವಿಜ್ಞಾನದ ಹೊಸ ಹೊಸ ಆವಿಷ್ಕಾರಗಳಿಂದ ತನ್ನದೇ ಆದ ಬದಲಾವಣೆಗಳಿಗಾಗಿ ಹೊಸ ರೂಪ ಪಡೆಯುತ್ತಿವೆ. ಪ್ರತಿಯೊಂದು ಸಮುದಾಯವು ತನ್ನ ಸ್ವಂತಿಕೆಯನ್ನು ರೂಪಿಸಲು ಪರಂಪರಾನುಗತವಾಗಿ ಬಂದಂತಹ ಕೆಲವು ಸಾಂಸ್ಕೃತಿಕ ಮಹತ್ವಗಳ ಬಗ್ಗೆ ಅಧ್ಯಯನ ಮಾಡಬೇಕಾದುದು ಅವಶ್ಯಕವಾಗಿದೆ. ಗ್ರಾಮ ದೈವಗಳಿಗೆ ಸಂಬಂಧಿಸಿದಂತೆ ಅಲ್ಲಿನ ಜನಪದರಲ್ಲಿ ಹಿಂದಿನಿಂದ ನಡೆದುಕೊಂಡು ಬಂದ ಆಚರಣೆಗಳು ತುಂಬಾ ಮಹತ್ವ ಪಡೆದು ಕೊಂಡಿರುತ್ತವೆ. ಇಂದಿನ ಗ್ರಾಮ ಸಂಸ್ಕೃತಿಗಳು ಆಧುನಿಕತೆಗೆ ಅಧೀನವಾಗಿ ಸಂಸ್ಕೃತಿಯಲ್ಲಿ ಬದಲಾವಣೆಗಳಾಗುತ್ತಿವೆ. ಇಂತಹ ಸಂಕ್ರಮಣಾವಸ್ಥೆಯ ಸಂದರ್ಭದಲ್ಲಿ ಮೂಲೆಗುಂಪಾಗುತ್ತಿರುವ ಗ್ರಾಮ ಪರಿಸರದ ಹಾಗೂ ಆಯಾ ದೈವಗಳಿಗೆ ಸಂಬಂಧಿಸಿದ ಆಚರಣೆಗಳ ಕುರಿತಾಗಿ ಅಧ್ಯಯನ ಮಾಡುವ ಕೆಲಸ ತುಂಬಾ ಮಹತ್ವಪೂರ್ಣವಾಗಿದೆ.

ಜಾನಪದ ನಮ್ಮ ಜನಪದರಿಂದ ಬಂದ ಒಂದು ಅಮೂಲ್ಯ ಗಣಿ ಅಸಂಖ್ಯಾತ ರೀತಿ–ನೀತಿ ನಂಬಿಕೆ, ಸಂಪ್ರದಾಯಗಳು ಜನಪದರ ಕೊಡುಗೆಗಳ ಮಾನವನ ಜೀವನವನ್ನು ಈ ಜಾನಪದ ರೂಪಿಸುವುದಲ್ಲದೇ ಆತನ ಬದುಕಿನ ಆಯಾಮವನ್ನು ಈ ಜಾನಪದ ಕಟ್ಟಿಕೊಡುತ್ತದೆ. ಒಂದು ಶಿಷ್ಠ ಸಮಾಜವನ್ನು ರೂಪಿಸುವಲ್ಲಿ ಸಂಸ್ಕೃತಿಯ ಪಾತ್ರ ಅತೀ ಮಹತ್ವವಾದುದು. ಅದರಂತೆ ಈ ಜನಪದ ಸಂಸ್ಕೃತಿ ಶಿಷ್ಠ ಸಂಸ್ಕೃತಿಯ ಬೆನ್ನೆಲುಬಾಗಿ ಸಹಕರಿಸುತ್ತಾ ಮುಂದೆ ಸಾಗುತ್ತದೆ. ಗ್ರಾಮೀಣ ದೈವಗಳ ಆಚರಣೆ ಅಥವಾ ಉತ್ಸವಗಳು ಜಾತೀಯತೆಯನ್ನು ಅಳಿಸುವಲ್ಲಿ ಕುಲ, ಮತ, ಬೇಧಭಾವ ಇಂತಹ ಅನೇಕ ಅಮಾನುಷ ಕೃತ್ಯಗಳನ್ನು ಹೋಗಲಾಡಿಸುವ ಸಾಂಕೇತಿಕವಾಗಿ ಜಾತ್ರೆ ಉತ್ಸವಗಳಲ್ಲಿ ನಾವು ಕಾಣಬಹುದು. ಅಷ್ಟಲ್ಲದೇ ಜನಪದ ಕಲೆಗಳ ಪ್ರದರ್ಶನವನ್ನು ಮನೋಹರವಾಗಿ ಪ್ರತಿಬಿಂಬಿಸುವ ಒಂದು ಕ್ಯಾಬಿನ್‌ತರ ಪರಿಗಣಿಸಬಹುದು. ಎಲ್ಲಾಸಮುದಾಯದ ಎಲ್ಲಾ ಜಾತಿ ಜನಾಂಗದವರ ಕುಲ– ಮತ ತೊರೆದು ಭಾವೈಕ್ಯತುಂದ ಒಂದಾಗಿ ಆಚರಿಸುವುದನ್ನ ಈ ಜಾತ್ರೆಗಳಲ್ಲಿ ಕಾಣಬಹುದು.

ಸಾಂಸ್ಕೃತಿಕ ಸಂದರ್ಭಗಳನ್ನು ಅಧ್ಯಯನ ಮಾಡುವಾಗ "ಬೈರಾಪುರದ ಮರಿಸ್ವಾಮಿ ಜಾನಪದ ಅಧ್ಯಯನ" ಬಹು ಮುಖ್ಯವಾದ ಸಂಗತಿಯಾಗಿದೆ. ಸಮುದಾಯದ ಮನದಲ್ಲಿ ನೆಲೆನಿಂತು ಪೂಜೆಗೊಳ್ಳುತ್ತಿರುವ ಮರಿಸ್ವಾಮಿ ಮತ್ತು ಆ ಸಮುದಾಯದವರ ಸಂಬಂಧ ಗಾಢವಾದುದ್ದು. ಇಂತಹ ಒಂದು ಸಂಸ್ಕೃತಿಯ ವಿಷಯಕ್ಕೆ ಸಂಬಂಧಿಸಿದಂತೆ ಲಭಿಸುವ ಎಲ್ಲಾ ಮಾಹಿತಿಗಳನ್ನು ಕಲೆಹಾಕಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜಾನಪದ ಇಂದು ಬಹುಮುಖಿಯ ಆಯಾಮಗಳಲ್ಲಿ ಮುಂದುವರೆಯುತ್ತಿರುವ ಕ್ಷೇತ್ರ ಬಹುಮುಖ ಜ್ಞಾನಕ್ಷೇತ್ರಗಳಿಂದ ಆಧುನಿಕ ಮಾನವನಿಗೆ ಜನಪದ ಬಗೆಗಿನ ಅಂತಃ ಪ್ರಜ್ಞಾವಲಯದ ಪಳಯುಳಿಕೆಗಳು ಮತ್ತು ಅವುಗಳ ಸಾಮಾಜಿಕ ಸಾಂಸ್ಕೃತಿಕ ಸಂಬಂಧಗಳ ಪರಿಚಯ ಉಂಟಾಗಲು ಸಾಧ್ಯವಾಗಿದೆ. ಈ ಕ್ಷೇತ್ರದಲ್ಲಿನ ಅಭಿರುಚಿ ಮತ್ತು ಅಗತ್ಯಗಳನ್ನು ಮನಗಂಡು ದೇಶ ವಿದೇಶಗಳಲ್ಲಿ ಜಾನಪದ ಸಂಸ್ಥೆಗಳು ಸ್ಥಾಪನೆಗೊಂಡಿವೆ. ಹಲವಾರು ವಿದೇಶಿ ಮಹಾವಿದ್ಯಾಲಯಗಳಲ್ಲಿ ಈ ಜಾನಪದವು ಅಧ್ಯಯನ

ವಿಷಯವಾಗಿದ್ದರೂ ಕೂಡಾ ಜನಾಂಗಕ್ಕೆ ಈ ಅಧ್ಯಯನದ ಪರಿಚಯವನ್ನು ಮಾಡಿಕೊಂಡು ಗಟ್ಟಿಕಾರ್ಯ ನಡೆದಿರುವುದು ಕೆಲವೇ ಕೆಲವು ಜಾನಪದ ವಿದ್ವಾಂಸರುಗಳಾದ ಸ್ಮಿಥ್‌ಥಾಮಸ್, ಅಲನ್‌ರ್ಡ್ಯೂಂಡ್ಸ್, ಆರ್.ಎಚ್. ಬಾಗ್ಸ್, ಡೊರ್ಸನ್, ಫ್ರೇಜರ್ ಇನ್ನು ಮುಂತಾದವರು ಈ ಜಾನಪದ ಕ್ಷೇತ್ರವನ್ನು ಒಂದು ಮಟ್ಟದಲ್ಲಿ ತಂದು ನಿಲ್ಲಿಸಿದ್ದಾರೆ.

## ಬೈರಾಪುರದ ಇತಿಹಾಸ

ಬೈರಾಪುರ ಗ್ರಾಮಕ್ಕೆ ಬ್ಯೆರಾಪುರ, ಓಬಳಾಪುರ ಎಂಬ ಹೆಸರುಗಳಿದ್ದು. ಇದನ್ನು ಇಂಗ್ಲೀಷ್‌ನಲ್ಲಿ Bhyrapura ಎಂದು ಕರೆಯುತ್ತಾರೆ. ಊರಿಗೆ ತನ್ನದೇ ಆದಂತಹ ಇತಿಹಾಸವನ್ನು ಹೊಂದಿದೆ. ಆದರೆ ಯಾವುದೇ ಒಂದು ನಿಖರವಾದಂತಹ ಆಧಾರಗಳಿಲ್ಲ ಏಕೆಂದರೆ ಈ ಗ್ರಾಮವು ಮೊಳಕಾಲ್ಮೂರಿನಿಂದ ಸುಮಾರು ಹತ್ತು ಕಿ.ಮೀ. ದೂರದಲ್ಲಿದೆ. ಆದರೆ ಇಲ್ಲಿ ಯಾವುದೇ ರೀತಿಯ ಶಾಸನಗಳಾಗಲಿ, ಹಸ್ತಪ್ರತಿಗಳಾಗಲಿ ಹಾಗೂ ದಂತಕಥೆಗಳಾಗಲಿ ಇಲ್ಲ. ಈ ಗ್ರಾಮದಲ್ಲಿ ಅತಿ ಹೆಚ್ಚು ಕಾಡುಗೊಲ್ಲರಿರುವುದು ಕಂಡು ಬರುತ್ತದೆ. ಈ ಊರಿನ ಪ್ರಮುಖರು ಅಂದರೆ ಹಿರಿಯರು ಈ ಊರಿನ ಇತಿಹಾಸದ ಬಗ್ಗೆ ನಿಖರವಾದ ಮಾಹಿತಿ ನೀಡಿಲ್ಲ.

## ಅಧ್ಯಯನದ ವ್ಯಾಪ್ತಿ

ಅಧ್ಯಯನದ ವ್ಯಾಪ್ತಿ ಚಿತ್ರದುರ್ಗ ಜಿಲ್ಲೆಯು ಗುಡ್ಡಗಾಡುಗಳಿಂದ ಆವೃತಗೊಂಡು ಮಳೆರಾಯನನ್ನೇ ನಂಬಿ ಜೀವನ ನಡೆಸುವಂತಹ ಮೋಳಕಾಲ್ಮೂರು ತಾಲೂಕಿನ ಭೈರಾಪುರವೇ ನನ್ನ ಕ್ಷೇತ್ರವಾಗಿದೆ. ಭೈರಾಪುರದ ಹಾಗೂ ಮರಿಸ್ವಾಮಿ ಜಾನಪದ ಅಧ್ಯಯನ ನನ್ನ ಅಧ್ಯಯನದ ವ್ಯಾಪ್ತಿಯಾಗಿರುತ್ತದೆ. ಜಾನಪದ ಸಾಹಿತ್ಯ ಒಂದು ಶಿಸ್ತಾಗಿ ಸಂಶೋಧನಾ ಕ್ಷೇತ್ರಕಾರ್ಯ ಕೈಗೂಡಿ ಬಂದಿದ್ದು ಸುಮಾರು ೨೦ನೇ ಶತಮಾನದ ಅವಧಿಯಲ್ಲಿ ಎನ್ನಬಹುದು. ಜನಪದ ಸಂಪ್ರದಾಯ, ಆಚರಣೆ, ನಂಬಿಕೆ, ಜಾತ್ರೆ ಈ ಪರಿಕಲ್ಪನೆಗಳಿಗೆ ಕಾರಣರಾದವರೆಂದರೆ ಜನಪದರು. ಜನಪದರ ಬದಲಾವಣೆಗಳಿಂದ ಈ ಪರಿಕಲ್ಪನೆಗಳಲ್ಲಿ ಸಹ ಬದಲಾವಣೆಯನ್ನು ಕಾಣಬಹುದಾಗಿದೆ. ಇಂತಹ ಬದಲಾವಣೆ ಹಿನ್ನಲೆಯಲ್ಲಿ ಜಾನಪದದ ಮತ್ತು ಅದರ ವ್ಯಾಪ್ತಿಯಲ್ಲಿ ನಿಗೂಢವಾಗಿ ಬದಲಾವಣೆಗಳಾಗಿರುವುದು ನಾವು ಕಾಣಬಹುದಾಗಿದೆ.

ಪ್ರತಿಯೊಂದು ಜಾತ್ರೆ ಆಯಾ ಧರ್ಮದ ಮತ-ತತ್ವಗಳ ಪ್ರಸಾರಕ್ಕೆ ಹೆಚ್ಚು ಮಹತ್ವ ಕೊಡುತ್ತದೆ. ಸಂಸ್ಕೃತಿ ಸಾಹಿತ್ಯ ವಿವಿಧ ವಿದ್ವಾಂಸರಿಂದ ಪ್ರಚಾರಗೋಳಿಸುತ್ತಾರೆ. ಭಾವೈಕ್ಯತೆ ಮತ್ತು ಸಂಸ್ಕೃತಿಯ ಪರಿಚಯವೂ ಆಗುತ್ತದೆ. ಸಮ್ಮಯ ಸಂಪತ್ತು ಜಾತ್ರೆ ಎಲ್ಲರ ಕ್ಷೇಮಾಭಿವೃದ್ಧಿಗಾಗಿ ಒಂದು ನಿಗಧಿತವಾದ ಸಮಯದಲ್ಲಿ ದೇವರುಗಳ ಹೆಸರಿನಲ್ಲಿ, ಧಾರ್ಮಿಕ ಕ್ಷೇತ್ರ ಒಂದರಲ್ಲಿ ಸಾಮೂಹಿಕವಾಗಿ ಆಚರಿಸುವ ಧಾರ್ಮಿಕ ವಿಧಿಯಾಗಿ ಇಂದು ರೂಢಿಯಲ್ಲಿದೆ. ಇದು ಅನೇಕ ಜಾನಪದ ಅಂಶಗಳನ್ನು ತನ್ನಲ್ಲಿಟ್ಟುಕೊಂಡು ಒಂದು ಸಂಕೀರ್ಣ ವ್ಯವಸ್ಥೆಯಾಗಿದೆ. ಗ್ರಾಮದಿಂದ ನಗರದವರೆಗೆ ಜಾತ್ರೋತ್ಸವವೊಂದು ಪುಣ್ಯ

ಪ್ರಸಂಗವಾಗಿದೆ. ಎಲ್ಲರೊಂದಿಗೆ ಕೂಡಿ ಮಾಡುವ ಹಬ್ಬವಾಗಿದೆ. ಸಾಮಾಜಿಕ ಜನಜೀವನದ ವ್ಯವಸ್ಥೆ ಸುರಕ್ಷಿತವಾಗಿ ಮುನ್ನಡೆಸಲು ಮತ್ತು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದ ಸಂಸ್ಕೃತಿಯ ಪ್ರವಾಹವನ್ನು ಮುಂದುವರಿಸುವುದೇ ಆಗಿದೆ. ಜಾನಪದ ಮೌಖಿಕ ಪರಂಪರೆಯ ಹಿನ್ನೆಲೆಯಲ್ಲಿ ಈ ಅಧ್ಯಯವನ್ನು ಆರಂಭಿಸಲಿದ್ದೇನೆ. ಜನಪದರು ಆಚರಿಸುವಂತಹ ಆಚರಣೆ, ನಂಬಿಕೆ, ಸಂಪ್ರದಾಯ ಹಾಗೂ ಜನಪದ ಕಲೆಗಳನ್ನು ಒಳಗೊಂಡಂತಹ ಜಾತ್ರೆಗಳು ಎಷ್ಟರ ಮಟ್ಟಿಗೆ ಉಳಿಸಿಕೊಂಡು ಬಂದಿವೆ. ಮತ್ತು ಪ್ರದರ್ಶನವಾಗುತ್ತವೆ. ಎಂಬ ಅಂಶಗಳನ್ನೇ ಪ್ರಮುಖವಾಗಿ ಚರ್ಚಿಸಲಿದ್ದೇನೆ.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕು ಗುಡ್ಡಗಾಡುಗಳಿಂದ ಕೂಡಿದ್ದು ಬಯಲು ಪ್ರದೇಶವೆನಿಸಿಕೊಂಡು ಮಳೆರಾಯನನ್ನೆ ನಂಬಿ ಜೀವನ ನಡೆಸುವಂತಹ ಭೈರಾಪುರ ಗ್ರಾಮವೇ ನನ್ನ ಕ್ಷೇತ್ರವಾಗಿದೆ. ಸಂಶೋಧನೆಯ ವಿಷಯವಾಗಿರುವ "ಭೈರಾಪುರದ ಮರಿಸ್ವಾಮಿ ಜಾನಪದ ಅಧ್ಯಯನ" ಎಂಬ ವಿಷಯವನ್ನು ಪ್ರಬಂಧದ ರೂಪದಲ್ಲಿ ಮಂಡಿಸಲು ಕೆಳಗಿನ ಸಂಶೋಧನಾ ವಿಧಾನವನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿ ಪಡೆಯಲು ನಾನು ಆಯ್ದುಕೊಂಡ ಕ್ಷೇತ್ರದಲ್ಲಿ, ಕ್ಷೇತ್ರದ ಅಧ್ಯಯನದಲ್ಲಿ ಕಾರ್ಯ ಕೈಗೊಂಡಾಗ ಅಲ್ಲಿಯ ಊರಿನ ಪ್ರಮುಖರನ್ನು, ಹಿರಿಯರನ್ನು, ಹೆಣ್ಣುಮಕ್ಕಳನ್ನು, ಅರ್ಚಕರನ್ನು ಹಾಗೂ ಅಕ್ಕ ಪಕ್ಕದ ಊರಿನ ಪ್ರಮುಖರಿಂದ ಮಾಹಿತಿ ಪಡೆಯಲು ಅತ್ಯಂತ ಸೂಕ್ತವಾದಂತಹ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅದೇ ರೀತಿ ಈ ಪ್ರಶ್ನಾವಳಿಯ ಮೂಲಕ ಉತ್ತರಿಸಿದ ಉತ್ತರವನ್ನು ಮೌಖಿಕ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಅವಲೋಕಿಸಿ ವಿಷಯಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಪಡೆದು ಅಧ್ಯಯನದಲ್ಲಿ ಅಳವಡಿಸಿಕೊಂಡಿದ್ದೇನೆ.

ಅಧ್ಯಯನದ ವೈಧಾನಿಕೆಯಲ್ಲಿ ಪ್ರಮುಖವಾದ ಸಂಶೋಧನಾ ವಿಧಾನವೆಂದರೆ ಸಂದರ್ಶನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಜಾತ್ರೆಯ ಹಿನ್ನೆಲೆ, ದೇವರ ಪರಂಪರೆ ಹಾಡು, ಕತೆ, ಗಾದೆ, ಒಗಟು ಹಾಗೂ ಆಚರಿಸುವಂತಹ ಆಚರಣೆಗಳನ್ನು ಪ್ರಮುಖ ಹಿರಿಯರನ್ನು, ಅರ್ಚಕರನ್ನು ಮತ್ತು ಹೆಣ್ಣುಮಕ್ಕಳನ್ನು ಸಂದರ್ಶನ ಮಾಡಿ ಅವರಿಂದ ಈ ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿ ಪಡೆದು ಪ್ರಬಂಧದಲ್ಲಿ ಮಂಡಿಸಿದ್ದೇನೆ. ಸಂಶೋಧನೆಯ ಸಮಯದಲ್ಲಿ ಮಾಹಿತಿಯ ಸಂಗ್ರಹಿಸಲು ಸಂಶೋಧನಾ ಸಾಮಗ್ರಿಗಳಾದಂತಹ ಕ್ಯಾಮರಾ, ಟೇಪರೆಕಾರ್ಡರ್ ಲೇಖನಗಳನ್ನೂ ಸಹ ಬಳಸಿಕೊಂಡು ಕ್ಷೇತ್ರಕಾರ್ಯ ಮಾಡಿ ಪ್ರಬಂಧ ಸಿದ್ಧಪಡಿಸಿದ್ದೇನೆ. ಈ ಪ್ರಬಂಧದ ಮೊದಲನೇ ಅಧ್ಯಯನದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯಾಗಿದ್ದು, ಇದರಲ್ಲಿ ಜಾನಪದ ಮೌಖಿಕ ಹಿನ್ನೆಲೆಯಲ್ಲಿ ಆಚರಣೆ, ನಂಬಿಕೆ, ಸಂಪ್ರದಾಯ ಹಾಗೂ ಜಾನಪದ ಕಲೆಗಳನ್ನು ಒಳಗೊಂಡಂತಹ ಜಾತ್ರೆಗಳು ಎಷ್ಟರ ಮಟ್ಟಿಗೆ ಉಳಿಸಿಕೊಂಡು ಬಂದಿದೆ ಮತ್ತು ಪ್ರದರ್ಶನವಾಗುತ್ತಿದೆ. ಎಂಬ ಅಂಶಗಳನ್ನು ಪ್ರಮುಖವಾಗಿ ಚರ್ಚಿಸಿದ್ದೇನೆ. ಈ ಪ್ರಬಂಧದ ಉದ್ದೇಶವೇನು? ಇದರ ವ್ಯಾಪ್ತಿ ಎಷ್ಟು ಇದೆ ಎಂಬುದನ್ನು ಈ ಮೊದಲ ಅಧ್ಯಯನದಲ್ಲಿ ಚರ್ಚಿಸಿದ್ದೇನೆ. ಎರಡನೆಯ ಅಧ್ಯಯನದಲ್ಲಿ ಭೌಗೋಳಿಕ ವಿವರ ಅಂದರೆ ನಾನು ಆರಿಸಿಕೊಂಡಿರುವ ಕ್ಷೇತ್ರವಾದ

ಭೈರಾಪುರದ ಭೌಗೋಳಿಕ ಪರಿಸರ ಯಾವ ರೀತಿ ಇದೆ. ಈ ಪರಿಸರ ಜನಪದರಿಗೆ ಹಾಗೂ ದೇವರಿಗೆ ಯಾವ ನಿಟ್ಟಿನಲ್ಲಿ ಹೊಂದಾಣಿಕೆಯಾಗಿದೆ, ಪ್ರಾಣಿ-ಪಕ್ಷಿಗಳು ಯಾವ ಯಾವ ಜಾತಿಯಿಂದ ಕೂಡಿವೆ. ಅಲ್ಲಿನ ನೆಲ, ಭೂಮಿ, ಖನಿಜ ಈ ತರಹದ ಸಂಪತ್ತುಗಳು ಯಾವ ಪ್ರಮಾಣದಲ್ಲಿವೆ. ನಾಡುನುಡಿ ಅಭಿಮಾನ ಒಬ್ಬರಿಗೊಬ್ಬರ ಪರೋಪಕಾರ ಭಾವನೆಣೆಷ್ಟರ ಮಟ್ಟಿಗೆ ಇದೆ. ಎಂಬುದನ್ನು ಈ ನನ್ನ ಎರಡನೆಯ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಮೂರನೇಯ ಅಧ್ಯಯನದಲ್ಲಿ ದೇವರ ಭೌತಿಕ ವಿವರದ ಬಗ್ಗೆ ಚರ್ಚಿತವಾಗಿದೆ. ಮರಿಸ್ವಾಮಿ ದೇವರಿಗೆ ಯಾವ ರೀತಿಯ ಉಡುಗೆ ತೊಡುಗೆಗಳನ್ನು ತೊಡಿಸಿದ್ದಾರೆ ಏಕೆ ತೊಡಿಸುತ್ತಾರೆ. ಯಾವ ಸಂದರ್ಭದಲ್ಲಿ ಅದೇ ತರಹದ ಉಡುಪು ತೊಡುಪುಗಳನ್ನ ಹಾಕುತ್ತಾರೆ. ವಾರ್ಷಿಕಾವರ್ತನದಲ್ಲಿ, ಜೀವನಾವರ್ತನದಲ್ಲಿ ಯಾವ ಈ ಉಡುಗೆ ತೊಡುಗೆಗಳ ಆಚರಣೆ ಮಾಡುತ್ತಾರೆ. ಇವುಗಳ ಮೇಲಿನ ಜನಪದರು ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. ಈ ರೀತಿ ಉಡುಪು ಮೊದಲಿನಿಂದಲೂ ಅಥವಾ ಇತ್ತಿಚಿನ ಆಚರಣೆ ಎಂಬ ವಿಷಯವನ್ನು ಮೂರನೆಯ ಅಧ್ಯಯನದಲ್ಲಿ ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಯನದಲ್ಲಿ ಮೌಖಿಕ ಜಾನಪದ ಅಂಶಗಳಾದ ಪುರಾಣ, ಕತೆ, ಗಾದೆ, ಒಗಟು, ಹಾಡು ಇತ್ಯಾದಿ ಅಂಶಗಳನ್ನು ಜನಪದರು ಈ ದೇವರ ಮೇಲೆ ಯಾವ ರೀತಿಯಾಗಿ ಕಟ್ಟಿ ಹಾಡುತ್ತಾರೆ. ಈ ದೇವರ ಹುಟ್ಟು ಬೆಳವಣಿಗೆ ಆಚರಣೆ, ಸಂಪ್ರದಾಯ, ಇವೆಲ್ಲವುಗಳನ್ನು ಅಧ್ಯಯನದಲ್ಲಿ ಬಳಸಿಕೊಂಡಿದ್ದೇನೆ. ಹಾಗೂ ವಿಶ್ಲೇಷಣೆಯನ್ನು ಸಹ ಮಾಡಿದ್ದೇನೆ. ಐದನೆಯ ಅಧ್ಯಯನವಾದ ಆಚರಣೆಗಳು ಮರಿಸ್ವಾಮಿ ದೇವರ ಬಗ್ಗೆ ಆಚರಿಸುವಂತಹ ಆಚರಣೆಗಳನ್ನು ಮಾನವನ ಜೀವನಾವರ್ತನಾಚರಣೆಗಳಾದ ಜನನದಲ್ಲಿ, ನಾಮಕರಣ, ಜವಳಿಕಾರ್ಯಕ್ರಮ, ಹಾಗೂ ಮರಣದ ಸಂದರ್ಭದಲ್ಲಿ ಆಚರಿಸುತ್ತಾರೆ. ಮತ್ತು ವಾರ್ಕಾವರ್ತನದಲ್ಲಿ ಬರುವಂತಹ ಹಬ್ಬ ಹರಿದಿನ, ಅಮವಾಸೆ, ಹುಣ್ಣಿಮೆ ಹಾಗೂ ಜಾತ್ರೆಯ ಸಂದರ್ಭದಲ್ಲಿ ಯಾವ ರೀತಿಯ ಆಚರಣೆಗಳನ್ನು ಆಚರಿಸುತ್ತಾ ಬಂದಿದಾರೆ. ಮತ್ತು ಅವು ಸಂಪ್ರದಾಯಿಕವಾಗಿ ನೆಲೆಯನ್ನು ಹೊಂದುತ್ತಾ ಬಂದಿವೆಯೇ ಎಂಬುದನ್ನು ಈ ಐದನೆಯ ಅಧ್ಯಯನದಲ್ಲಿ ಮಂಡಿಸಲಾಗಿದೆ.

ಕೊನೆಯ ಅಧ್ಯಯನವಾದಂತಹ ಸಮಾರೂಪ ಮತ್ತು ದೇವರ ಜಾತ್ರೆ ಸಂದರ್ಭದಲ್ಲಿ ಆಚರಿಸುವಂತಹ ಆಚರಣೆ, ಕಲೆಗಳನ್ನು ಕ್ಯಾಮರಾದ ಮೂಲಕ ಸೆರೆಹಿಡಿದ ಭಾವಚಿತ್ರಗಳನ್ನು ಮತ್ತು ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲಿ ಸಂದರ್ಶಿಸಿದ ವಕ್ತೃ ವಿವರವನ್ನು ತಿಳಿಸಿದೆ. ಒಟ್ಟಾರೆಯಾಗಿ ಈ ಪ್ರಬಂಧವು ಆರು ಅಧ್ಯಯನಗಳಿಂದ ಕೂಡಿದ್ದು, ಎಲ್ಲಾ ಮೌಖಿಕ ಜನಪದ ಕಲೆಗಳ ವಿವರ ಮಾಹಿತಿಯನ್ನು ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತದೆ.

## ಅಧ್ಯಾಯ ೨
# ಭೌಗೋಳಿಕ ವಿವರ

ಒಂದು ಉರು ಅಭಿವೃದ್ಧಿ ಪಥದಲ್ಲಿ ಮುನ್ನಡೆಯಲು ನೆರವಾಗುವ ಕಾರಣಗಳಲ್ಲಿ ಅದು ನಗರ/ಪಟ್ಟಣಕ್ಕೆ ಭೌಗೋಳಿಕವಾಗಿ ಎಷ್ಟು ಸಮೀಪದಲ್ಲಿದೆ ಮತ್ತು ವ್ಯವಹಾರಿಕವಾಗಿ ಬಾಹ್ಯ ಜಗತ್ತಿನೊಂದಿಗೆ ಎಷ್ಟು ನಿಕಟ ಸಂಬಂಧ ಇಟ್ಟುಕೊಂಡಿದೆ ಎಂಬುದು ಪ್ರಮುಖ ನಿರ್ಣಾಯಕ ಅಂಶಗಳಾಗಿರುತ್ತವೆ. ಭಾರತದ ರೇಷ್ಮೆ ಸೀರೆಗಳಿಗೆ ಪ್ರಸಿದ್ಧತೆಯನ್ನು ಪಡೆದುಕೊಂಡ ಮೊಳಕಾಲ್ಮೂರು ತಾಲೂಕು ಕೇಂದ್ರವಾಗಿದೆ. ಈ ಭೈರಾಪುರ ಮೋಳಕಾಲ್ಮೂರಿನಿಂದ ಸುಮಾರು ೧೦ ಕಿ.ಮೀ. ದೂರದಲ್ಲಿರುವ ರ್‍ಾಷ್ಟ್ರೀಯ ಹೆದ್ದಾರಿ ಬೆಂಗಳೂರು ಬಳ್ಳಾರಿ ರಸ್ತೆಯಲ್ಲಿ ಬರುತ್ತದೆ. ಹಾಗೆಯೇ ಆಂದ್ರ ಪ್ರದೇಶವು ಕೂಡಾ ಭೈರಾಪುರದಿಂದ ೧೫ ಕಿ.ಮೀ.ದೂರದಲ್ಲಿದೆ.

ಮೋಳಕಾಲ್ಮೂರು ಚಿತ್ರದುರ್ಗ ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿದೆ. ಅದರಲ್ಲಿ ಭೈರಾಪುರವು ಚಿಕ್ಕೇರಹಳ್ಳಿ ಗ್ರಾಮ ಪಂಚಾಯ್ತಿಗೆ ಒಳಪಟ್ಟಿರುವಂತಹ ಗ್ರಾಮ. ಈ ತಾಲೂಕು ಅನಾವೃ, ಅಭಾವಗಳಿಗೆ ಹೆಸರಾದ ಹಿಂದುಳಿದ ತಾಲೂಕಾಗಿದೆ. ತಾಲೂಕಿನ ಉತ್ತರವರೆಗೆ ಚಾಚಿಕೊಂಡಿದೆ. ಈ ತಾಲೂಕಿನ ಪೂರ್ವಕ್ಕೆ ಆಂದ್ರ ಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲೂಕು, ಪಶ್ಚಿಮ ಮತ್ತು ಉತ್ತರಕ್ಕೆ

ಬಳ್ಳಾರಿ ಜಿಲ್ಲೆ ಕೂಡ್ಲಿಗಿ ಮತ್ತು ಸಂಡೂರು ತಾಲೂಕುಗಳನ್ನು ಹಾಗೂ ದಕ್ಷಿಣಕ್ಕೆ ಚಿತ್ರದುರ್ಗ ಜಿಲ್ಲೆಯ ಚಳ್ಳಕೇರೆ ತಾಲೂಕುಗಳನ್ನು ಮೇರೆಗಳನ್ನಾಗಿ ಹೊಂದಿದೆ.

ಈ ತಾಲೂಕಿನ ವಿಸ್ತೀರ್ಣ ೭೩೭ ಚ.ಕಿ.ಮೀಗಳು ಈ ತಾಲೂಕು ಒಟ್ಟು ೯೧ ಗ್ರಾಮಗಳನ್ನು ಹೊಂದಿದೆ. ಈ ಪ್ರದೇಶವು ಬಯಲು ಸೀಮೆಗೆ ಸೇರಿದ ಪ್ರದೇಶವಾಗಿದ್ದರಿಂದ ಇಲ್ಲಿ ಮಳೆಯ ಪ್ರಮಾಣ ಕಡಿಮೆಯಾಗಿದೆ. ಬಿಸಿಲಿನ ತಾಪಮಾನವು ಹೆಚ್ಚಾಗಿ ಕಂಡುಬರುತ್ತದೆ. ಈ ತಾಲೂಕಿನಲ್ಲಿ ಯಾವುದೇ ದೊಡ್ಡ ನದಿಗಳು ಹರಿಯುವುದಿಲ್ಲ. ಭೈರಾಪುರ ಗ್ರಾಮವು ಸುಮಾರು ಒಂದು ಸಾವಿರ ಮನೆಗಳನ್ನು ಹೊಂದಿದೆ. ಇಲ್ಲಿ ತುಂಗಭದ್ರಾ ನದಿಯ ಮುಖ್ಯ ಉಪನದಿಯಾದ ಜನಗನಹಳ್ಳ (ಚಿನ್ನಹಗರಿ) ಹರಿಯುತ್ತದೆ. ಈ ನದಿಯನ್ನು 'ಅಘಹರಿ' ಅಥವಾ 'ಪಾಪನಾಶಿನಿ' ಎಂಬ ಹೆಸರುಗಳಿಂದ ಕರೆಯುತ್ತಾರೆ. ಈ ಹಗರಿ ಮುಂದೆ ಹರಿದು ಆಂದ್ರ ಪ್ರದೇಶಕ್ಕೆ ಹಾಯ್ದು ಹೋಗುತ್ತದೆ. ಈ ಹಗರಿಗೆ ಅಡ್ಡವಾಗಿ ರಂಗಯ್ಯನದುರ್ಗ ಜಲಾಶಯ ಆಣೆಕಟ್ಟು ನಿರ್ಮಿಸಿದ್ದಾರೆ. ಈ ಜಲಾಶಯದಿಂದ ಕೆಲವು ಕೆರೆಗಳಿಗೆ ನೀರು ಸರಬರಾಜಾಗುತ್ತದೆ. ಚಿಕ್ಕೇರಹಳ್ಳಿ, ಭಟ್ರಹಳ್ಳಿಕೆರೆ, ಅಮಕುಂದಿಕೆರೆ, ನಾಗಸಮುದ್ರಕೆರೆ, ಮತ್ತು ಅಶೋಕ ಸಿದ್ದಾಪುರ ಕೆರೆಗಳಿಗೆ ನೀರು ಸರಬರಾಜಾಗಿ ನೀರಾವರಿ ವ್ಯವಸ್ಥೆಯಿಂದ ಕೆಲವೊಂದು ಹಳ್ಳಿಗಳಿಗೆ ಉಪಯುಕ್ತವಾಗಿದೆ. ಈ ನೀರಾವರಿಯಿಂದ ಭೈರಾಪುರ ಗ್ರಾಮವು ಕೂಡಾ ಒಂದಾಗಿದೆ. ಇಲ್ಲಿ ಮುಖ್ಯವಾಗಿ ಜೋಳ, ಶೆಂಗಾ, ಹತ್ತಿ, ಈರುಳ್ಳಿ ಬೆಳೆಗಳನ್ನು ಬೆಳೆಯುತ್ತಾರೆ.

ಈ ತಾಲೂಕಿನ ಪೂರ್ವಶ್ರೇಣಿಯ ಕಣ ಶಿಲೆಯ ಬೆಟ್ಟಗುಡ್ಡಗಳಿಂದ ತುಂಬಿದ ಸಾಲಿನಂತೆ ಕಾಣುತ್ತದೆ. ಎಲ್ಲಾ ಬೆಟ್ಟಗಳು ನಗ್ನಶಿಲಾಮಯವಾಗಿದೆ. ಭೈರಾಪುರ ಗ್ರಾಮವು ಉತ್ತರದಿಂದ ದಕ್ಷಿಣದವರೆಗೆ ಮತ್ತು ಪೂರ್ವದಿಮದ ಪಶ್ಚಿಮದವರೆಗೆ ಸುತ್ತಲು ಬೆಟ್ಟಗಳಿಂದ ಕೂಡಿದೆ. ಭೈರಾಪುರದ ಪೂರ್ವಕ್ಕೆ ಬುಟಕ್ಕನಗುಡ್ಡ ಪಶ್ಚಿಮಕ್ಕೆ ವಿಭೂತಿ ಗುಡ್ಡ ಹಾಗೂ ದಕ್ಷಿಣಕ್ಕೆ ಯಾವುದೇ ಬೆಟ್ಟಗಳಿಲ್ಲ. ಉತ್ತರಕ್ಕೆ ಶ್ರೀನುಂಕಪ್ಪನಗುಡ್ಡ ಹೀಗೆ ನಾಲ್ಕು ಮೇರೆಗಳನ್ನು ಹೊಂದಿದೆ. ಈ ಗ್ರಾಮವು ಬೆಟ್ಟಗಳಿಂದ ಕೂಡಿರುವುದರಿಂದ ಖಾಸಗಿ ಉಧ್ಯಮಿಗಳು ಜೆಲ್ಲಿ ಹೊಡೆಯುವ ಮಿಷನ್ (ಕಾರ್ಖಾನೆ) ಯನ್ನು ಸ್ಥಾಪಿಸಿದ್ದಾರೆ. ಈ ಊರಿನ ಎಲ್ಲಾ ಜನರಿಗೂ ಕೆಲಸ ಸಿಗದೇ ಇದ್ದರೂ ೫೦ ಕುಟುಂಬದವರು ಬದುಕುವಷ್ಟು ಸಹಾಯಕವಾಗಿದೆ. ಇಲ್ಲಿನ ಜನತೆಯ ಮುಖ್ಯ ಕಸಬು ವ್ಯವಸಾಯವಾಗಿದ್ದರೂ, ಸಹ ಕೂಲಿ ಜೀವನವನ್ನೇ ಹೆಚ್ಚಾಗಿ ಅವಲಂಭಿಸಿದ್ದಾರೆ. ಈ ಪ್ರದೇಶದಲ್ಲಿ ಅಂದರೆ ಭೈರಾಪುರದಲ್ಲಿ ಯಾವುದೇ ರೀತಿಯ ಸಂಪದ್ಭರಿತವಾದ ಅರಣ್ಯ ಸಂಪತ್ತಾಗಲಿ ಕಂಡು ಬರುವುದಿಲ್ಲ. ಆದ್ದರಿಂದ ಜನರು ಕೆಲಸಗಳಿಗಾಗಿ ಬೇರೆ ನಗರಗಳಿಗೆ ವಲಸೆ ಹೋಗುವುದುಂಟು. ಬಳ್ಳಾರಿ, ಸಂಡೂರು, ಚಿತ್ರದುರ್ಗ ಇಂತಹ ನಗರಗಳಿಗೆ ಜೀವನ ನಡೆಸಲು ವಲಸೆ ಹೋಗುತ್ತಾರೆ. ಮೊಳಕಾಲ್ಮೂರು ಪ್ರದೇಶವನ್ನು ಶಾತವಾಹನರು, ಕದಂಬರು ಆಳ್ವಿಕೆ ಮಾಡಿದ್ದರು. ಅಲ್ಲದೆ ಈ ಪ್ರದೇಶವು ರಾಷ್ಟ್ರಕೂಟರ ಆಳ್ವಕೆಗೂ ಸೇರಿತ್ತು. ೧೦ನೇಯ ಶತಮಾನದಲ್ಲಿ ನೊಳಂಬವಾಡಿ ೩೨೦೦೦ ಸೀಮೆಯಲ್ಲಿ ಸೇರ್ಪಡೆಗೊಂಡಿತ್ತು. ಆದ್ದರಿಂದ ಭೈರಾಪುರ ಗ್ರಾಮದಲ್ಲಿಯು ಸಹ ಕದಂಬರ ಒಂದು ಅವಶೇಷ ಸ್ಮಾರಕ, ಶಿಲ್ಪ ಕಂಡುಬರುತ್ತದೆ.

ಭೈರಾಪುರ ಗ್ರಾಮದಲ್ಲಿ ಅನೇಕ ಜಾತಿಯ ಜನಾಂಗದವರು ವಾಸಿಸುತ್ತಾರೆ. ಆಯಾ ಕಸಬುಗಳಿಗನುಗುಣವಾಗಿ ಈ ಗ್ರಾಮದಲ್ಲಿ ವಾಸಿಸುತ್ತಾರೆ. ಕಾಡುಗೊಲ್ಲರು, ಹೆಳವರು, ನಾಯಕರು, ಕಂಬಾರ, ಕುಂಬಾರ, ಬಡಗಿ, ಒಡ್ಡರು, ಮಾದಿಗರು, ಲಿಂಗಾಯತರು, ಮತ್ತು ಬ್ರಾಹ್ಮಣರು ಹೀಗೆ ಮುಂತಾದ ಜನಾಂಗದವರು ಈ ಪ್ರದೇಶದಲ್ಲಿ ವಾಸಿಸುತ್ತಾರೆ. ಇಲ್ಲಿನ ಭಾಷೆ ಹೆಚ್ಚಾಗಿ ಕನ್ನಡ-ತೆಲುಗು ಮುಖ್ಯವಾಗಿದೆ. ಈ ಊರಿಗೆ ಮುಖ್ಯವಾಗಿ ಸಂತೆ, ಕಾಳುಕಡಿ ವ್ಯವಹಾರ ತಾಲೂಕು ಕೇಂದ್ರವಾದ ಹಾಗೂ ರೇಷ್ಮೆ ಸೀರೆಗಳಿಗೆ ಪ್ರಸಿದ್ಧವಾದ ಮೊಳಕಾಲ್ಮೂರುಪಟ್ಟಣವಾಗಿದೆ. ಈ ಊರಿಗೆ ವಾಹನಗಳ ಸೌಕರ್ಯವಿದೆ. ಏಕೆಂದರೆ ಬೆಂಗಳೂರಿನಿಂದ ಬಳ್ಳಾರಿ ರ್‍ಾಷ್ಟ್ರೀಯ ಹೆದ್ದಾರಿ ಭೈರಾಪುರದ ಮೂಲಕವೇ ಹಾದು ಹೋಗಿದೆ. ಈ ಗ್ರಾಮವು ಮಳೆಯನ್ನೇ ನಂಬಿ ಜೀವನ ಮಾಡುವಂತಹ ಗ್ರಾಮವು ಆಗಿದೆ. ದೈನಂದಿನ ವ್ಯವಹರದ ಈಡೇರಿಕೆಗಾಗಿ ಅವರು ಪ್ರತ್ಯೇಕ ಸ್ಥಳಗಳನ್ನು ಅವಲಂಬಿಸಿದ್ದಾರೆ. ಉದಾ: ಕೋರ್ಟ್, ಕಛೇರಿ, ಔಷಧಿ, ಗೊಬ್ಬರ, ವಿದ್ಯಾಭ್ಯಾಸ, ವಸ್ತ್ರಗಳು, ಸಿನಿಮಾದಂತಹ ಕಾರಣಗಳಿಗಾಗಿ ಮೊಳಕಾಲ್ಮೂರು, ವಿಶೇಷ ದಿನಗಳ ಜವಳಿ ಖರೀದಿಗೆ ಬಳ್ಳಾರಿ, ರಾಯದುರ್ಗ, ಚಿತ್ರದುರ್ಗ, ಮುಂತಾದ ಪಟ್ಟಣಗಳ ವ್ಯವಹಾರ ವಹಿವಾಟುಗಳನ್ನು ಇಟ್ಟುಕೊಂಡಿದ್ದಾರೆ. ಈ ರೀತಿಯ ನೆರಹೊರ ಸಂಪರ್ಕಗಳಿಂದಲ್ಲದೇ ಊರಿಗೆ ಬರುವ ದಿನಪತ್ರಿಕೆ, ರೇಡಿಯೋ, ಟೆಲಿವಿಷನ್, ಟೆಲಿಫೋನ್, ಮೋಬೈಲ್ ಸೌಲಭ್ಯಗಳು ಹೊರ ಜಗತ್ತನ್ನು ಅತ್ಯಂತ ಪರಿಣಾಮಕಾರಿಯಾಗಿ 'ಭೈರಾಪುರ' ಕ್ಕೆ ನಿತ್ಯ ಎಳೆದು ತರುತ್ತದೆ. ಇದು ಗ್ರಾಮೀಣ ಬದುಕಿನ ವಿವಿಧ ಮಗ್ಗಲುಗಳ ಮೇಲೆ ಸಹಜವಾಗಿಯೇ ತೀವ್ರ ಪ್ರಭಾವ ಬೀರುತ್ತದೆ.

**ನೆಲ-ಜಲ** : ಹಿಂದಿನವರು ಊರು ಕಟ್ಟುವಾಗ ಆ ನೆಲದ ಫಲವತ್ತತೆ, ನೀರಿನ ಸೌಕರ್ಯ ಹಾಗೆಯೇ ಸುರಕ್ಷತೆ ಮೊದಲಾದ ಕೆಲವು ಅಂಶಗಳನ್ನು ಪ್ರಮುಖವಾಗಿ ಗಮನಿಸುತ್ತಿದ್ದರು. ಭೈರಾಪುರ ಬಯಲು ಸೀಮೆಯ ಒಂದು ಗ್ರಾಮ ಭೂಮಿ ಅಂಗೈಯಂತೆ ಸಮತಟ್ಟವಾದುದು. ಊರಿನಿಂದ ದಕ್ಷಿಣಕ್ಕೆ ಹೋದಂತೆ ಭೂಮಟ್ಟ ಎತ್ತರವಾಗುತ್ತಾ ಹೋಗುತ್ತದೆ. ಹೊಲದ ಬಯಲು ಬಿಡುತ್ತಿದ್ದಂತೆ ಪ್ರಾರಂಭವಾಗುವ ಕೆಳಗಲ ಗದ್ದೆಗಳು, ಮೇಲಿನ ಗದ್ದೆಗಳು ಊರಿನ ದನ, ಕುರಿಗಳಿಗೆ ಮೇವಿನ ತಾಣವಾಗಿವೆ. ಊರ ಪಶ್ಚಿಮಕ್ಕೆ ಚಿಕ್ಕೇರಹಳ್ಳಿ ಹಾಗೂ ರಂಗಯ್ಯನದುರ್ಗ ಜಲಾಶಯ ಆಣೆಕಟ್ಟು ಇದೆ.ಇಲ್ಲಿ ವಿಶಾಲವಾದ ಗದ್ದೆ ಬಯಲು, ಪ್ರಧಾನವಾಗಿದೆ. ಇದು ಕೆಂಪು, ಸವಳುಭೂಮಿ. ಇಂತಹ ಭೂಮಿ ಹೊಂದಿರುವುದರಿಂದ ಹೆಚ್ಚಾಗಿ ಮರಳು ಮಿಶ್ರಿತ ಭೂಮಿಯಾಗಿರುವುದರಿಂದ ಶೇಂಗಾ ಬೆಳೆಯಲು ಸುಲಭವಾಗಿದೆ. ಎರೆನೆಲಗಳಲ್ಲಿ ಹೆಚ್ಚಾಗಿ ಭತ್ತ ಬೆಳೆಯುತ್ತಾರೆ.

**'ಭೈರಾಪುರ'** ಕಡಿಮೆ ಪ್ರಮಾಣದ ಮಳೆ ಬೀಳುವ ವಲಯದಲ್ಲಿದೆ ಎನ್ನಬಹುದು. ಸುಮಾರು ೬೦ ವರ್ಷಗಳ ಹಿಂದೆ ಇಲ್ಲಿ ಮಳೆ ಹೆಚ್ಚಾಗಿ ಸುರಿಯುತ್ತಿತ್ತೆಂದು ಇದರಿಂದ ಅರಣ್ಯ ಸಂಪತ್ತು ಕೂಡಾ ಸಂಪದ್ಭರಿತವಾಗಿತ್ತೆಂದು ತಿಳಿದು ಬರುತ್ತದೆ. ಆದರೆ ಈಗ ಮಳೆಯು ಕಡಿಮೆಯಾಗಿರುವುದರಿಂದ ಜನರು ಜೀವನ ನಡೆಸಲು, ಅರಣ್ಯಸಂಪತ್ತನ್ನು ನಾಶಮಾಡಿ ಜೀವನ ನಡೆಯಬೇಕಾಗಿರುವುದರಿಂದ ಅರಣ್ಯ

ಸಂಪತ್ತೆಲ್ಲಾ ನಾಶವಾಗಿದೆ. ಈಗಲೂ ಮುಳ್ಳಿನ ಕಟ್ಟಿಗೆ (ರೀಜರ್ ಕಟ್ಟಿಗೆ) ಯನ್ನು ಕಡಿದು ಬಳ್ಳಾರಿ ನಗರಕ್ಕೆ ಹೊಯ್ದು ಜೀವನ ಮಾಡುವವರು ಇದ್ದಾರೆ. ಇದರ ಪರಿಣಾಮನೀರಿನ ಸಮಸ್ಯೆ ಆಗಿದೆ. ಮೊದಲು ಈ ಊರು ಕಟ್ಟಿದಾಗ ಇಲ್ಲಿ ನೀರಿನ ಸೌಕರ್ಯ ಹೇಗಿತ್ತೋ ಗೊತ್ತಿಲ್ಲ. ತೀರಾ ಹಿಂದೆ ಬಾವಿಗಳು ಇದ್ದು ಅವು ಮುಚ್ಚಿ ಹೋಗಿರಬಹುದೋ ಏನೋ ಆದರೂ ಈಗಿನ ಕೆಲ ಹಿರಿಯ ವ್ಯಕ್ತಿಗಳು ತಮ್ಮ ಹಿಂದಿನವರು ಹೇಳುತ್ತಿದ್ದ ಸಂಗತಿಗಳನ್ನು ಆಧರಿಸಿ ನೀಡಿದ ಮಾಹಿತಿಯನ್ನು ನಂಬುವುದಾದರೆ ಈ ಊರಿಗೆ ಮೊದಲು ಬಾವಿ ಇರಲಿಲ್ಲ ಊರಿನಿಂದ ಸುಮಾರು ಅರ್ಧ ಪರ್ಲಂಗ್ ದೂರದಲಿ 'ಹಗರಿ' ಹರಿಯುತ್ತದೆ. ಆ ಹಗರಿಯಿಂದ ನೀರು ತಂದು ಕುಡಿಯಬೇಕಾಗಿತ್ತಂತೆ, ನಂತರ ಕಾಲಾಂತರದಲ್ಲಿ ಊರಿನಲ್ಲೇ ಬಾವಿಗಳನ್ನು ಕಟ್ಟಿಕೊಂಡಾಗಿನಿಂದ ನೀರಿನಿಂದ ಯಾವ ಸಮಸ್ಯೆಗಳು ಇಲ್ಲ. ಈ ಊರಿನಲ್ಲಿ ಸುಮಾರು ಒಂದೊಂದು ಸಮುದಾಯದವರಿಗೂ ಒಂದೊಂದು ಬಾವಿಗಳು ಇವೆ. ಅಂದರೆ ಕಾಡುಗೊಲ್ಲ, ಲಿಂಗಾಯತ, ಮಾದಿಗ ಈ ಮೂರು ಸಮುದಾಯಗಳೇ ಮುಖ್ಯವಾದವುಗಳು ಒಟ್ಟಿನಲ್ಲಿ ಈ ಊರಿನಲ್ಲಿ ಸುಮಾರು ಐದು ಬಾವಿಗಳಿವೆ. ಇವುಗಳಲ್ಲಿ ಎರಡು ಸಿಹಿ ನೀರು ಹಾಗೂ ಉಳಿದವು ಉಪ್ಪು ನೀರಿನಿಂದ ಕೂಡಿವೆ. ಈ ಬಾವಿಗಳ ಆಳ ೮೦ ಅಡಿಗಿಂತಲೂ ಕಡಿಮೆ ಇಲ್ಲ. ಈಗ ಬಾವಿಗಳಲ್ಲಿ ಜಲವಿಲ್ಲದೇ ಹಾಳುಬಿದ್ದಿವೆ. ಸುಮಾರು ಐದು ವರ್ಷಗಳ ಹಿಂದೆ ಈ ಬಾವಿಗಳು ಬಳಕೆಯಾಗುತ್ತಿದ್ದವು. ಈಗ ಜಲ ಭತ್ತಿ ಹೋಗಿರುವುದರಿಂದ ಹಾಳು ಬಿದ್ದಿವೆ.

ಇಷ್ಟಲ್ಲದೇ ನೀರಿನ ಪೂರೈಕೆ ಕಡಿಮೆಯಾದುದರಿಂದ, ಸರ್ಕಾರದಿಂದ ಈ ಊರಿನಲ್ಲಿ ಐದಾರು ರಿಗ್ ಬೋರ್‌ಗಳನ್ನು ಹಾಕಿದ್ದರು. ಮೂರು ಬೋರ್‌ಗಳಲ್ಲಿ ನೀರು ಚೆನ್ನಾಗಿಯೇ ಇತ್ತು ಆದರೆ ಕ್ರಮೇಣವಾಗಿ ಇವುಗಳಲ್ಲಿಯೂ ನೀರಿಲ್ಲದೇ ಹೊಂಡು ಬರುವಂತಾಯಿತು. ಈಗ ಇನ್ನಷ್ಟು ಆಳವಾಗಿ ಬೋರುಗಳನ್ನು ಕೊರೆಸಿ ಸಾರ್ಕಾರ ಕಿರು ನೀರು ಸರಬರಾಜು ಯೋಜನೆಯ ಅಡಿ ೧೯೯೦ ರಿಂದೀಚೆಗೆ ಊರಿಗೆ ಐದಾರು ಮಿನಿ ಟ್ಯಾಂಕುಗನ್ನು ನಿರ್ಮಿಸಿದ್ದಾರೆ.

ಊರ ಒಳಗಿನ ಸ್ಥಿತಿ ಹೀಗಾದರೆ ಊರ ಹೊರಗಿನ ಸ್ಥಿತಿ ಇದಕ್ಕೆ ವಿರುದ್ದವೇ ಆಗಿದೆ. ಜಮೀನಿನಲ್ಲಿ ಹಿಂದೆ ಸುಮಾರು ೩೦-೪೦ ಅಡಿಗಳಗೆ ನೀರು ಸಿಗುತ್ತಿತ್ತು. ಆದರೆ ಈಗ ನೀರಿನ ಪ್ರಮಾಣ ಕಡಿಮೆಯಾಗಿರುವುದರಿಂದ ಕೊಳವೆ ಬಾವಿಗಳನ್ನು ತೊಡಿಸಿ ಸರ್ಬಮರ್ಸಿಬಲ್ ಪಂಪ್ಗಳನ್ನು ಹಾಕಿಸಿ ತೋಟ-ತುಡಿಕೆ ಮಾಡುತ್ತಿದ್ದಾರೆ. ಈಗ ಊರ ಸುತ್ತ್ತ ತೋಟಗಳಿವೆ. ಈ ಬೋರುಗಳು ಬಂದ ಮೇಲೆ ಬಾವಿಗಳಲ್ಲಿನ ಜಲ ಸಂಪೂರ್ಣ ಬತ್ತಿವೆ. ಕಾರಣ ಭೂಮಿಯ ಮೇಲಿನ ಹಂತದಲ್ಲಿ ನೀರಿನ ಪ್ರಮಾಣ ಕಡಿಮೆಯಾಗಿದೆ. ತಜ್ಞನೊಬ್ಬನ ಅಭಿಪ್ರಾಯದ ಪ್ರಕಾರ ನೀರಿನ ಸೌಕರ್ಯ ಕಡಿಮೆ ಇದೆ ಏಕೆಂದರೆ ಈ ಪ್ರದೇಶ ಬೆಟ್ಟ ಗುಡ್ಡಗಳಿಂದ ಆವೃತವಾಗಿರುವುದರಿಂದ ಬಂಡೆ ಕೆಳಗಡೆ ನೀರು ಸಿಗುತ್ತದೆ. ಎಂಬ ಅಭಿಪ್ರಾಯ. ಸುಮಾರು ೨೫೦ರಿಂದ ೩೦೦ ಅಡಿ ಆಳ ಬೋರು ಕೊರೆಯಿಸಬೇಕು.

## ಸಸ್ಯ ಸಂಪತ್ತು

'ಭೈರಾಪುರದಲ್ಲಿರುವ ಅರಣ್ಯ ಅಥವಾ ಸಸ್ಯಸಂಪತ್ತಿನ ಪರಿಚಯ ಮಾಡಿಕೊಡುವದು ಶ್ರಮದ ಕೆಲಸ. ಏಕೆಂದರೆ ಇಲ್ಲಿ ಹೆಸರು ಗೊತ್ತಿರುವ ಗಿಡಮರಗಳಿಗಿಂತ ಗೊತ್ತಿಲ್ಲದ ಮರಗಳೇ ಹೆಚ್ಚಾಗಿ ಕಂಡುಬರುವುದಿಲ್ಲ. ಇದು ಬಯಲು ಪ್ರದೇಶವಾಗಿರುವುದರಿಂದ ಮಳೆಯ ಪ್ರಮಾಣ ಸಹ ಕಡಿಮೆ. ಬೆಟ್ಟ ಗುಡ್ಡಗಳಲ್ಲಿರುವಂತಹ ಮರಗಿಡಗಳ ಪ್ರಮಾಣ ಸಾದಾರಣ ಮಟ್ಟದಲ್ಲವೆ. ತೋಟಗಾರರಿಗೆ ಈಗಾಗಲೇ ಪರಿಚಯವಿರುವ ಮಾವು, ಹಲಸು, ಸಪೋಟ ಇನ್ನು ಮೊದಲಾದ ಹಣ್ಣಿನ ಮರಗಳನ್ನು ಬೆಳೆಸುವ ಹಾಗೆ ಹೊಸದಾಗಿ ಪರಿಚಯವಾದ ಡೀಸೆಲ್‌ಗಿಡ (ಅವುಡ್ಲಗಿಡದ ಹೋಲಿಕೆ) ಗಳನ್ನು ಬೆಳೆಸುವ ಮನೋಬಾವ ಹೊಂದಿದ್ದಾರೆ. ಹಿಂದೆ ತೆಂಗಿನಮರಗಳನ್ನೇ ಕಾಣದ ತೋಟಗಳಲ್ಲಿ ಈಗ ಸಾಕಷ್ಟು ತೆಂಗಿನ ಮರಗಳನ್ನು ಹಾಕುತ್ತಿದ್ದಾರೆ. ಮಳೆಗಾಲದಲ್ಲಿ ಹೊಲದ ಬಯಲಿನಲ್ಲಿ ಬೆಳೆಯುವ ಕಳೆ, ಸಸ್ಯಗಳು ಒಂದು ಕಡೆ ದನಗಳಿಗೆ ಮೇವು ಆದರೆ, ಇನ್ನೊಂದಡೆ ಅವುಗಳಲ್ಲಿ ಕೆಲವು (ಅಣ್ಣಿಸೊಪ್ಪು, ಕೃಗಾಣಿಕೆ ಮೊದಲಾದವು) ಬೆರಕೆಸೊಪ್ಪಿನ ಹೆಸರಿನಲ್ಲಿ ರುಚಿಯಾದ ಸಾಂಬಾರು ಮಾಡಲು ಬಳಕೆಯಾಗುತ್ತದೆ. (ಬರಗಾಲದಲ್ಲಿ ಅಂತಹ ಸೊಪ್ಪನ್ನ ಬೇಬಿಸಿತಿಂದು ಬದುಕುವವರೂ ಉಂಟು) ಕೆಲವು ಉತ್ತಮ ನಾಟಿ ಔಷಧಿಯಾಗಿ ಬಳಕೆಯಾಗುತ್ತವೆ. 'ಹೊನ್ನಗೊನೆಸೊಪ್ಪು ತಿಂದರೆ ಹೋದ ಕಣ್ಣು ಮರಳಿ ಬಂದವು ಎಂಬ ಗಾದೆಯೂ ಇದೆ.

ಈ ಊರಿನ ಗುಡ್ಡಗಾಡುಗಳಲ್ಲಿ ಹಾಲುಗಳ್ಳಿ ಮರಗಳು ಹೆಚ್ಚಾಗಿ ಕಂಡು ಬರುತ್ತವೆ. ಇವಲ್ಲದೇ ಸೀತಾಫಲಗಿಡಗಳು, ತುಗ್ಗಲಿಗಿಡಗಳು ಹೀಗೆ ಹಲವಾರು ಜಾತಿಯ ಮರಗಿಡಗಳು ಈ ಗುಡ್ಡಗಳಲ್ಲಿ ಕಂಡು ಬರುತ್ತವೆ. ಇದರ ಹಾಲು ಕಣ್ಣಿಗೆ ಬಿದ್ದರೆ ಸಾಮಾನ್ಯವಾಗಿ ಕಣ್ಣು ಕಳೆದುಕೊಳ್ಳುವ ಸಾಧ್ಯತೆಗಳು ಇವೆ. ಏಕೆಂದರೆ ಬಹಳಷ್ಟು ಉರಿ ಬರುತ್ತದೆ. ಈ ಕಳ್ಳಿ ಹಾಲಿನಿಂದ ಪೋಸ್ಟ್‌ಕವರ್ ಹಚ್ಚುವುದಕ್ಕೆ, ಶಾಲಾಮಕ್ಕಳು ಹರಿದ ಪುಸ್ತಕಗಳಿಗೆ ಈ ಹಾಲನ್ನು ಹಚ್ಚಿ ಅಂಟಿಸುತ್ತಾರೆ. ಈ ಹಾಲು ಅಂಟು ರೀತಿಯಲ್ಲಿ ಅಂಟಿಕೊಳ್ಳುತ್ತದೆ. ಅಲ್ಲಲ್ಲಿ ಜಮೀನು ಹಾಗೂ ಹೊಲಗಳಲ್ಲಿ ಮನೆಗಳಿಗೆ ಮುಟ್ಟು ಬರುವಂತಹ ಮರಗಳನ್ನು ಬೆಳೆಸಿಕೊಂಡಿದ್ದಾರೆ. ಬೇವಿನಮರ. ನೀಲಗಿರಿಮರ, ಹುಣಸೆಮರಗಳು ಹೆಚ್ಚಾಗಿ ಕಂಡು ಬರುತ್ತವೆ. ಇವು ಸಾಮಾನ್ಯವಾಗಿ ಬೆಲೆಬಾಳುವಂತಹ ಮರಗಳಾಗಿವೆ. ಇವುಗಳಿಂದ ಮನೆಗಳನ್ನು ಕಟ್ಟಿಸಲು, ಮತ್ತು ಬಂಡಿಗಳ ತಯಾರಿಕೆಗೆ ಉಪಯೋಗಿಸುತ್ತಾರೆ. ಆದ್ದರಿಂದ ಮನೆಗಳನ್ನು ಕಟ್ಟಿಸಲು ಬಂಡಿಗಳ ತಯಾರಿಕೆಗೆ ಮರಗಳನ್ನು ಉಪಯೋಗಿಸುತ್ತಾರೆ. ಆದ್ದರಿಂದ ಮರಗಳನ್ನು ಹೊಲಗಳಲ್ಲಿ ಬೆಳೆಸಿಕೊಳ್ಳುತ್ತಾರೆ. ಇವುಗಳಲ್ಲಿ ಇನ್ನಿತರೆ ಮರಗಳನ್ನೂ ಸಹ ಬೆಳೆಸುತ್ತಾರೆ. ಇಂದು ಕಡಿಮೆ ಖರ್ಚಿನಲ್ಲಿ ಹೆಚ್ಚು ಹಣ ಕಾಣುವ ಅಪೇಕ್ಷೆ ಹೆಚ್ಚಾಗುತ್ತಿದ್ದು, ಅದಕ್ಕಾಗಿ ವ್ಯವಸಾಯದ ಜಮೀನಿನಲ್ಲೂ ಇಂತಹ ಮರಗಳನ್ನು ಬೆಳೆಸುತ್ತಾರೆ.

## ಪಶು–ಪಕ್ಷಿ

ಪಶು ಪಕ್ಷಿ ನಿಸರ್ಗದ ಹಾಗೇ ಮನುಷ್ಯನ ಬದುಕಿಗೆ ಒಂದು ಭಾಗ ಭಾರತೀಯ ಸಂದರ್ಭದಲ್ಲಿಯಂತೂ ರೈತರಿಗೆ ಮಳೆ ಬೆಳೆಯಷ್ಟು ದನ–ಕುರಿಗಳುಮುಖ್ಯವಾದವುಗಳಾಗಿವೆ. 'ಭೈರಾಪುರ'ದಲ್ಲಿ ದನ, ಎಮ್ಮೆ, ಕುರಿಗಳ ಸಂಖ್ಯೆಯೇ ಜಾಸ್ತಿ. ಜಮೀನು ಇರುವವರಿಗೆ ಒಂದು ಜೊತೆ

ಎತ್ತುಗಳು ಉಳುಮೆಗೆ ಅತ್ಯಗತ್ಯ. ಅವುಗಳನ್ನು ಕೊಳ್ಳಲು ಸಾಕಷ್ಟು ಹಣವಿಲ್ಲದಿದ್ದರೂ ಮೋಟು ಎತ್ತುಗಳನ್ನಾದರೂ ಇಟ್ಟುಕೊಳ್ಳುತ್ತಾರೆ. ಹಾಲು ಕೊಡುವ 'ಗೋಮಾತೆ'ಯನ್ನು ನೇಗಿಲಿಗೆ ಕಟ್ಟಲು ಕೆಲ ಸಂಪ್ರದಾಯಸ್ಥ ರೈತರು ಇಷ್ಟಪಡುವುದಿಲ್ಲ. ಗದ್ದೆಯ ಉಳುಮೆಗೆ ಕೋಣಗಳನ್ನು ಬೇರೆ ಕಡೆ ಬಳಸುವುದುಂಟು. ಆದರೆ ಈ ಊರಿನಲ್ಲಿ ಕೋಣಗಳನ್ನು ಬಳಸುವುದಿಲ್ಲ. ಹಿಂದೆ ಪ್ರಯಾಣಕ್ಕೆ ಎತ್ತು ಗಾಡಿಗಳನ್ನು ಬಳಸುತ್ತಿದ್ದುದು ಸರಿಯಷ್ಟೆ ಈಗ ಬಸ್ಸುಗಳು ಬಂದು ಆ ಸುಂದರ ಕಮಾನುಗಾಡಿಗಳು ಮಾಯವಾಗಿವೆ. ಆದರೆ ಇಂದು ವಿಪರೀತ ನೂಕು ನುಗ್ಗಲಿನಿಂದಾಗಿ ಬಸ್ಸುಗಳ ಪ್ರಯಾಣ ಅಸಹನೀಯವಾಗುತ್ತಿದೆ. ಇಂದಿಗಿಂತ ಹಿಂದಿನ ಗಾಡಿ ಪ್ರಯಾಣವೇ ಎಷ್ಟೋ ಸೊಗಾಸಾಗಿತ್ತು. ಎಂದು ಕೆಲವರು ಮೆಲುಕು ಹಾಕುತ್ತಾರೆ.

ದನ, ಎಮ್ಮೆಗಳ, ಹಾಲು ಉತ್ಪನ್ನ ಎಣ್ಣೆ ಹಾಗೂ ಗೊಬ್ಬರದ ಕಾರಣಕ್ಕಾಗಿ ಕೆಲವರು ಕುರಿಗಳನ್ನು ಸಾಕುತ್ತಾರೆ. "ಕುರಿ ಇದ್ದರೆ ಮನೆಯಲ್ಲಿ ನಗದು ಹಣವಿದ್ದಂತೆ" ಎಂದು ಭಾವಿಸುತ್ತಾರೆ. ಕೋಳಿಗಳೂ ಹೀಗೆ ಬಂದು ಮಿತ್ರರು ಮನೆಗೆ ಬಂದಾಗ ಕೋಳಿಕೋಯ್ಯುವುದು ಗೌರವದ ಔತಣವೆಂದು ಭಾವಿಸುತ್ತಾರೆ. ಹಿಂದೆ ಗೊಬ್ಬರಕ್ಕಾಗಿ ಕೆಲವರು ಕತ್ತೆಗಳನ್ನು ಸಾಕುತಿದ್ದರಂತೆ. ಹಸು, ಎಮ್ಮೆ, ಆಡು, ಇವು ಹಾಲು ಉತ್ಪನ್ನಗಳಿಗೆ ಸಾಕಿಕೊಂಡರೆ ಉಣ್ಣೆ, ಗೊಬ್ಬರ, ಹಣಕಾಸಿಗೆ ಕುರಿಗಳನ್ನು ಹಾಗೂ ಕೋಳಿ, ಕೋಣ ಮತ್ತು ಕುರಿಗಳನ್ನು ಮಾಂಸಕ್ಕಾಗಿ ಸಾಕುತ್ತಾರೆ. ಗೊಬ್ಬರವನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಕ್ಕೆ ಮತ್ತು ಬಟ್ಟೆಗಳನ್ನು ಹೊರುವುದಕ್ಕೆ ಕತ್ತೆಗಳನ್ನು ಸಾಕುತ್ತಾರೆ. ಭೈರಾಪುರ ಗ್ರಾಮದ ಒಳಗಡೆ ಹಂದಿ ಬರುವಂತಿಲ್ಲ. ಮತ್ತು ಬೇಟೆಯಾಡುವ ಶಿಕಾರಿಗೆ ಹೋಗುವಂತಿಲ್ಲ. ಅಂದಿನಿಂದ ಇಂದಿನವರೆಗೆ ಈ ಸಂಪ್ರದಾಯವನ್ನು ನಾಟಿಹೋರಿಗಳಿಗಿರುವ ಗೌರವ, ಸೀಮೆ ಹಸುಗಳಿಗೆ ಬರಲಾರದು. ಸೀಮೆ ಹಸುವಿನಲ್ಲಿ ಅಕಸ್ಮಾತ್ ಗಂಡುಕರು ಹುಟ್ಟಿದರಂತು ಅದು ಸಾಕಷ್ಟು ಹಾಲಿಲ್ಲದೆ ಉಳಿಯುವುದೇ ಅಪರೂಪ. ಗೋಸಾುಗೆ ಕಸಾುಖಾನೆ ಸಾಬರೂ ಹೆಚ್ಚು ಬೆಲೆ ಕೊಡುವುದಿಲ್ಲ. ಉಳುಮೆಗೂ ಆಗುವುದಿಲ್ಲ. ಅದೊಂದು ನಷ್ಟದ ಬಾಬ್ತು ಎಂದು ಬಾವಿಸುವವರೇ ಹೆಚ್ಚು. ಕೋಣಗಳು ಇದ್ದರೆ ಅವುಗಳನ್ನು ಚಿಕ್ಕದರಲ್ಲಿಯೇ ಕೊಯ್ದುಕೊಳ್ಳಲು ಮಾದಿಗರಿಗೆ ಕೊಟ್ಟುಬಿಡುತ್ತಾರೆ. ಸಂಪ್ರದಾುಕ ಮನೋಭಾವದ ರೈತರು ಹಸು, ಹೋರಿ,ಗಳನ್ನು ದೇವರೆಂದು ಭಾವಿಸುತ್ತಾರೆ. ಈ ಊರಿನಲ್ಲಿ ಸೋಮವಾರದಂದು ದನಗಳನ್ನು ಬೇಸಾಯಕ್ಕೆ ಹೂಡುವುದಿಲ್ಲ. ಅವನ್ನು ತಮಗಿಂತಲೂ ಮುತವರ್ಜಿನಿಂದ ನೋಡಿಕೊಳ್ಳಬೇಕೆಂದು ಕಿರಿಯರಿಗೆ ಬುದ್ದಿ ಹೇಳುತ್ತಾರೆ. ಹಿರಿಯರ ಪ್ರಕಾರ ದನ 'ಹುಸೂರ್' ಅಂದೋನ ಮನೆ ನೆಟ್ಟಗಾಗೋಲ್ಲ. ಗೋವಿನ ಪೂಜೆ ದೇವರ ಪೂಜೆಗೂ ಹೆಚ್ಚಿನದೆಂಬುದಕ್ಕೆ ಸಾಮತಿಯಾಗಿ ಅವರು ಈ ಕತೆಯನ್ನು ಹೇಳಿದ್ದಾರೆ. "ಮನುಷ್ಯ ಈ ಲೋಕಕ್ಕೆ ಬರುವಾಗ ಸ್ವಾಮಿ ನೇಗಿಲು, ಗುದ್ದಲಿ, ಶನಿಕೆ, ಮಂಕರಿ ಎಲ್ಲಾ ಕೊಟ್ಟುಬಿಟ್ಟೆ: ನಿನ್ನ ನೆನಪು ಮಾಡಿಕೊಳ್ಳಲು ಬಿಡುವಿಲ್ಲದಂಗೆ ಮಾಡಿದೆಯಲ್ಲಾ" ಅಂತ ದೇವರಲ್ಲಿ ಕೇಳಿದನಂತೆ. ಆಗ ದೇವರು ಈ ಎತ್ತು ನೇಗಿಲು ಕೊಟ್ಟಿದ್ದೀನಲ್ಲಾ ಇವುಗಳ ಸ್ಮರಣೆ ಮಾಡು, ಅದರಲ್ಲಿ ಅರ್ಧ ನನಗೆ ಸೇರುತ್ತದೆ: ಗೋಪೂಜೆ ಶ್ರೇಷ್ಠ, ಕಲ್ಲುದೇವರ ಪೂಜೆ ಅಲ್ಲ. ಎಂದು ದೇವರು ಹೇಳಿದನಂತೆ.

ಇಲ್ಲಿ ಕಾಡೇ ಇಲ್ಲವಾದ್ದರಿಂದ ಕಾಡು ಪ್ರಾಣಿಗಳು ಇಲ್ಲ. ಗುಡ್ಡಗಳಲ್ಲಿ ಮಾತ್ರ, ಮೊಲ, ಕರಡಿ, ನರಿ, ತೋಳ ಇಂತವುಗಳಿಂದ ಬೇಸಿಗೆಯಲ್ಲಿ ಮೇಯಲು ಹೊರಗೆ ಬಂದ ಕುರಿ ಮತ್ತು ಮೇಕೆಗಳಿಗೆ ಆಪತ್ತು ಆಗುವುದುಂಟು. ಮೊಲಗಳನ್ನು ಜನರು ಬೇಟೆಯಾಡಿ ತಿನ್ನುತ್ತಾರೆ. ಇಲ್ಲಿನ ಪಕ್ಷಿಲೋಕವು ವೈವಿಧ್ಯಮಯವಾದುದೇನೂ ಅಲ್ಲ. ಕಾಗೆಗಳು ಅನಿಷ್ಟದ ತಿರಸ್ಕಾರಕ್ಕೆ ಸಂಕೇತವಾಗಿ ಒಳಗಾಗಿದ್ದರೆ ಗೂಚಕ್ಕಿಗಳು ಮೈತ್ರಿಯ ದ್ಯೂತಕವಾಗಿ ರೈತರ ಮನೆಗಳಲ್ಲಿ ಆಶ್ರಯ ಪಡೆದಿವೆ. ಬರಗಾಲ ಬಂದು ಊರೇ ಬಿಟ್ಟು ಹೋದ ಜನ ಮತ್ತೇ ಎಷ್ಟೋ ವರ್ಷದ ನಂತರ ಹಿಂದಿರುಗುವವರೆಗೂ ಗೂ ಚಕ್ಕಿಗಳು ಅವರ ಮನೆ ಕಾಯ್ದುಕೊಂಡಿದ್ದವಂತೆ. ಅದಕ್ಕಾಗಿ ಈ ಕೃತಜ್ಞತೆ ಗೂಚಕ್ಕಿ ಇರುವ ಮನೆಯಲ್ಲಿ ದೆವ್ವ ಭೂತಾದಿಗಳು ಇರುವುದಿಲ್ಲ ಎಂಬ ನಂಬಿಕೆಯೂ ಇದೆ. ಹಿಂದಿನ ಕಾಲದಲ್ಲಿ ಪಾರಿವಾಳಗಳಿಗಾಗಿ ತಮ್ಮ ಮನೆಯ ಗೋಡೆಗಳಲ್ಲಿ ಗೂಡುಗಳನ್ನು ಮಾಡಿರುತ್ತಿದ್ದರು. ಪಾರಿವಾಳವನ್ನು ತಿನ್ನುವವರು ಹೆಚ್ಚಾದಂತೆ ಈಗ ಅವುಗಳ ಸಂಖ್ಯೆಯೂ ಕ್ಷಿಣಿಸಿದೆ. ಇಲ್ಲಿ ಗಿಣಿ ಗೊರವಂಕಗಳು ಅಪರೂಪಕ್ಕೆ ಕಂಡುಬರುತ್ತವೆ. ಅದೇ ರೀತಿ ಜನಪದರ ಭಾಷೆಯಲ್ಲಿ ಕಂಬಾರ ಕಾಗೆಗಳು ಸಹ ಕಂಡು ಬರುತ್ತವೆ. ಇವುಗಳನ್ನು ಕೊಂದು ತಿನ್ನುವವರು ಸಾಕಷ್ಟು ಜನರನ್ನು ಕಾಣಬಹುದು. ಅದೇರೀತಿ ಬೆಳ್ಳಕ್ಕಿಗಳು ಹಾಗೂ ಕೋಗಿಲೆಗಳು ಮಾಘಮಾಸದಲ್ಲಿ ಅಥವಾ ವಸಂತಮಾಸದಲ್ಲಿ ಅವುಗಳ ಇಂಪಾದ ರಾಗ ಕೇಳಿ ಬರುತ್ತದೆ. ಹೊಲದಲ್ಲಿ ಬೆಳೆ ಬಂದಾಗ ಗೌಜನ ಹಕ್ಕಿಗಳು ಕಂಡು ಬರುತ್ತವೆ. ಇವುಗಳ ರುಚಿ ಕಂಡವರು ತಿನ್ನದೇ ಬಿಡರು.[9] ಯಾವುದಾದರೂ ಪ್ರಾಣಿ ಸತ್ತು ಬಿದ್ದಾಗ ಮಾತ್ರ ನಾಯಿಗಳೊಡನೆ ಸೆಣಸಾಡಲು ಹಾಗೂ ಕೋಳಿಮರಿಗಳನ್ನು ಕದ್ದೋಯ್ಯಲು ದೂರದ ವಾಸಸ್ಥಳದಿಂದ ರಣಹದ್ದು ಹಾಗೂ ಅಗಸರ ಕಾಗೆಗಳು ವಾಸನೆ ಹಿಡಿದು ಹಾರಿಬರುತ್ತವೆ. ಹಾಗಾಗಿ ಅವುಗಳದು ಅಪರೂಪದ ದರ್ಶನ.

ಈ ಪರಿಸರದ ಜೀವ ಜಗತ್ತಿನ ಬಗ್ಗೆ ನಿಧಾನವಾಗಿ ಹುಡುಕಿದಂತೆ ಹೆಚ್ಚಿನ ಸಂಗತಿಗಳು ತಿಳಿದು ಬರಬಹುದು. ಆದರೆ ಇವುಗಳಲ್ಲಿ ಸದಾ ಇರುವ ಪ್ರಾಣಿ ಪಕ್ಷಿಗಳಿಗಿಂತ ಆಗೀಗ ಕಂಡುಬರುವವೇ ಹೆಚ್ಚು. ಅಲ್ಲದೇ ತೀರಾ ಅಪರೂಪದವುಗಳ ಹೆಸರುಗಳೇ ಗೊತ್ತಿಲ್ಲ. ಇಲ್ಲಿನ ಜನ ಅವುಗಳ ಬಗ್ಗೆ ತಿಳಿಯುವ ವಿಶೇಷ ಆಸಕ್ತಿ ಅಭಿರುಚಿಯನ್ನೇನೂ ಇಟ್ಟುಕೊಂಡಿದ್ದು ಕಂಡುಬರುವುದಿಲ್ಲ. ಕೆಲವರು ತಿನ್ನುವುದಾದರೆ ಅದನ್ನು ಹಿಡಿಯುವ ಬಗ್ಗೆ ಜಾಗರೂಕರಾಗುತ್ತಾರೆ. ಉಳಿದುದ್ದನ್ನು ನಿರ್ಲಕ್ಷಿಸುತ್ತಾರೆ. ಆದರೂ ಇಲ್ಲಿ ಕೆಲವೊಮ್ಮೆ ಜೀವಶಾಸ್ತ್ರಜ್ಞರ ಅಧ್ಯಯನಕ್ಕೆ ಉಪಯುಕ್ತವಾಗಬಲ್ಲ ಕೆಲ ಜೀವ ವಿಶೇಷಗಳು ಕಾಣಿಸಿಕೊಳ್ಳಬಹುದೆಂಬುದಕ್ಕೆ ಯಾವುದೇ ನಿರ್ದೇಶನವಿಲ್ಲ. ಮನುಕುಲಕ್ಕೆ ಸೇರಿದ ಕೋತಿ ಸಂತತಿಯು ಕಡಿಮೆ ಪ್ರಮಾಣದಲ್ಲಿ ಕಂಡು ಬರುತ್ತವೆ. ಯಾಕೆಂದರೆ ಇವುಗಳನ್ನು ತಿನ್ನುವವರು ಇರುವುದರಿಂದ ಇವುಗಳ ಕುಲಸಂತತಿ ಕಡಿಮೆಯಾಗಿಬಿಟ್ಟಿದೆ.

ವಿವಿಧ ಕಾಡು ಪ್ರಾಣಿ ಪಕ್ಷಿಗಳು ಸದಾ ವಾಸಿಸಲು ಬೇಕಾದ ಕಾಡು ಮರಗಳ ಸೌಲಭ್ಯವಿಲ್ಲದ್ದು ಇಲ್ಲಿ ಹೆಚ್ಚಿನ ಪ್ರಾಣಿ ಪಕ್ಷಿಗಳ ವೈವಿಧ್ಯ ಕಂಡುಬಾರದಕ್ಕೆ ಅವುಗಳ ಸಂಖ್ಯೆ ಸೀಮಿತವಾಗಿರುವುದಕ್ಕೆ ಅಥವಾ ಅವು ಕೆಲವು ಋತುಮಾನಗಳಲ್ಲಿ ಮಾತ್ರವೇ ಕಂಡು ಬರುವುದಕ್ಕೆ ಕಾರಣವೆನ್ನಬಹುದು. ಆದರೂ ಊರುಸುತ್ತ

ಗುಡ್ಡಗಳಿರುವುದರಿಂದ ಗುಡ್ಡಗಾಡುಗಳಲ್ಲಿ ವಾಸಿಸುತ್ತವೆ. ಇವುಗಳ ಆಹಾರ ತೋಟಗಳಲ್ಲಿನ ಪೈರುಗಳು ಆದರೂ ರೈತನಿಗೆ ತೊಂದರೆ ಕೊಡುವುದರಿಂದ ರೈತರು ಇವುಗಳನ್ನು ಸಾಯಿಸಲು ಮುಂದಾಗುತ್ತಾರೆ. ಭೈರಾಪುರದಲ್ಲಿ ಮುಖ್ಯವಾಗಿ ಕೋಳಿ ಸಾಕಾಣಿಕೆ ಮಾಡುತ್ತಾರೆ. ಇಲ್ಲಿನ ಉಧ್ಯಮದಾರರು ಸರ್ಕಾರದಿಂದ ಅಥವಾ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆದುಕೊಂಡು ಲಕ್ಷಾಂತರ ರೂಪಾಯಿ ಬಂಡವಾಳ ಹಾಕಿ ಕೋಳಿಫಾರಂ ಹಾಕಿದ್ದಾರೆ. ಇಲ್ಲಿ ಈ ರೀತಿಯ ಕೋಳಿ ಸಾಕಾಣಿಕೆ ಮಾಡುವುದರಿಂದ ಕೆಲವರಿಗೆ ಕೆಲಸ ದೊರೆತಂತಾಗಿದೆ. ಹಾಗೂ ಮಾಂಸಹಾರಿಗಳಿಗೆ ಅನುಕೂಲಕರವಾಗಿದೆ. ಇದರಿಂದ ಊರಿನ ಜನಗಳಿಗೆ ಯಾವುದೇ ರೀತಿಂದಲೂ ಅಪಾಯಕಾರಿಯಾಗಿಲ್ಲ. ಏಕೆಂದರೆ ಊರಿನಿಂದ ಸುಮಾರು ದೂರದಲ್ಲಿ ಈ ಕೋಳಿಫಾರಂಗಳನ್ನು ಹಾಕಿ ಕೊಂಡಿದ್ದಾರೆ.

ಇದು ಅಲ್ಲದೇ ಊರಿನಲ್ಲಿ ಸುಮಾರು ಏಳರಿಂದ ಎಂಟು ಅಂಗಡಿಗಳು ಸಹ ಇವೆ. ಒಂದು ದಿನಕ್ಕೆ ಒಂದು ಅಂಗಡಿಗೆ ಕನಿಷ್ಟ ರೂ ೫೦೦=೦೦ದಿಂದ ೧,೦೦೦=೦೦ವರೆಗೆ ವ್ಯಾಪಾರ ಆಗಬಹುದು ಏಕೆಂದರೆ ರಾಷ್ಟ್ರೀಯ ಹೆದ್ದಾರಿಯಗಿರುವುದರಿಂದ ಇಲ್ಲಿ ವ್ಯಾಪಾರವಾಗುತ್ತದೆ. ಅದೇ ರೀತಿ ಕೆಲವರು ಉದ್ಯೋಗದಲ್ಲಿಯು ಸಹ ಕಾರ್ಯನಿರತರಾಗಿದ್ದಾರೆ. ಈ ರೀತಿಯಾಗಿ ಭೈರಾಪುರ ಗ್ರಾಮವು ತನ್ನದೇ ಆದಂತಹ ಭೌಗೋಳಿಕ ಪರಿಸರವನ್ನು ಹೊಂದಿದ್ದು, ಭಾವೈಕ್ಯತೆಯ ಗ್ರಾಮವಾಗಿದೆ.

## ಅಧ್ಯಾಯ: ಮೂರು
# ದೇವರ ಭೌತಿಕ ವಿವರ

ಯಾವುದೆ ಒಂದು ವಸ್ತು ಸುಂದರವಾಗಿ ಕಾಣಬೇಕಾದರೆ ಅದಕ್ಕೆ ಉಡುಗೆ ತೊಡುಗೆಯ ಅಲಂಕಾರದಿಂದ ಮಾತ್ರ ಸಾದ್ಯ ಅದೇ ರೀತಿ ದೇವರಿಗೂ ಸಹ ಉಡುಗೆ ತೊಡುಗೆುಂದ ಅಲಂಕಾರಗೊಂಡಾಗ ಆ ದೇವರ ಮೂರ್ತಿ ಜನರಿಗೆ ಎದ್ದು ಕಾಣುತ್ತದೆ. ದೇವರ ಉಡುಗೆ ತೊಡುಗೆಗಳನ್ನು ಯಾವ ರೀತಿಯಾಗಿ ತೊಡಿಸುತ್ತಾರೆ. ತೊಡಿಸುವಂತಹ ಸಂದರ್ಭದಲ್ಲಿ ಯಾವ ಯಾವ ಆಚರಣೆಗಳನ್ನು ಮಾಡುತ್ತಾರೆ. ಎಂಬುದನ್ನು ದೇವರ ಭೌತಿಕ ವಿವರದಲ್ಲಿ ನಾವು ಕಾಣಬಹುದಾಗಿದೆ. ಈ ರೀತಿಯ ಆಚರಣೆಗಳನ್ನು ದೈನಂದಿನ, ವಾರದಲ್ಲಿ, ಅಮವಾಸೆ, ಹುಣ್ಣಿಮೆ ಮತ್ತು ಜಾತ್ರೆಯ ಸಂದರ್ಭದಲ್ಲಿ ದೇವರನ್ನು ಯಾವ ರೀತಿಯಾಗಿ ಅಲಂಕಾರ ಮಾಡುತ್ತಾರೆ ಎಂಬುದನ್ನು ಈ ದೇವರ ಭೌತಿಕ ವಿವರದಲ್ಲಿ ನಾವು ನೋಡಬಹುದಾಗಿದೆ.

### ೧. ಉಡುಗೆ ತೊಡುಗೆ

ಮರಿಸ್ವಾಮಿಯ ಉಡುಗೆ ತೊಡುಗೆಯನ್ನು ನೋಡುವುದಾದರೆ ಮರಿಸ್ವಾಮಿಯ ಉಡುಗೆಯಲ್ಲಿ ಒಂದು ಸಮುದಾಯದ ನಾಯಕನು ಯಾವ ರೀತಿಯಲ್ಲಿ ಉಡುಗೆಯನ್ನು ಹಾಕಿರುವನೋ ಹಾಗೆ ಈ ದೇವರಿಗೆ

ಉಡುಗೆ ಹಾಕಿದ್ದಾರೆ. ಮುಖ್ಯವಾಗಿ ರೇಷ್ಮೆಪಂಚೆ, ಅದರಲ್ಲಿ ಕೆಳಗಡೆ ಮತ್ತು ಮೇಲುಗಡೆ ಪಟ್ಟಿ ಬಂದಿರುವಂತಹ ಪಂಚೆಯನ್ನು ತೊಡಿಸಿದ್ದಾರೆ. ಹಾಗೆ ಹೆಗಲಿಗೆ ಹಾಕಿಕೊಳ್ಳುವ ಪೇಟ(ಶ್ಯಾಲು) ಕೇಸರಿ ಬಣ್ಣದಿಂದ ಕೂಡಿದ್ದು ಅಂಚು ಮಾತ್ರ ಚಿನ್ನದ ಕಲರನ್ನು ಹಾಗೂ ಮಿಂಚಿನ ರೂಪದಲ್ಲಿ ತಯಾರಿಸಿದ ಪೇಟವನ್ನು ಹಾಕಿದ್ದಾರೆ. ಅಂದರೆ ಅದು ಜರತಾರಿ ಪೇಟ ಹಾಕಿದ್ದಾರೆ. ಹಾಗೆಯೇ ಮರಿಸ್ವಾಮಿ ದೇವರ ಮೂರ್ತಿಯ ಮುಂದುಗಡೆ ಕೂತಿರುವಂತಹ ಕಾಲಂಚಿನಲ್ಲಿ ಕೆಂಪು ವಸ್ತ್ರದಲ್ಲಿ ಸುತ್ತಲೂ ಪಟ್ಟಿಯನ್ನು ಹೊಂದಿದ್ದು ಶಿವಲಿಂಗಾ ಬಸವಣ್ಣನ ಚಿತ್ರ ಹೊಂದಿರುವ ಬಟ್ಟೆಯನ್ನು ಹಾಕಿದ್ದಾರೆ.

ರಥೋತ್ಸವ ಸಂದರ್ಭದಲ್ಲಿ ಮರಿಸ್ವಾಮಿಯ ಮೂರ್ತಿಯ ಜೊತೆಗೆ ಈ ಪೇಟವನ್ನು ಸಹ ರಥದಲ್ಲಿ ಹಾಗೂ ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆಯನ್ನು ಮಾಡುತ್ತಾರೆ. ಈ ಪೇಟವು ಚಿನ್ನದ ಮೌಲ್ಯಕ್ಕೆ ಸಮಾನವಾದಂತದ್ದಾಗಿರುವುದರಿಂದ ಇದನ್ನು ಬಹಳ ಜೋಪಾನವಾಗಿಟ್ಟಿರುತ್ತಾರೆ. ಈ ರೀತಿಯ ಉಡುಗೆಯನ್ನು ಮರಿಸ್ವಾಮಿ ದೇವರಿಗೆ ಹಾಕಿರುವುದು ಕಂಡುಬರುತ್ತದೆ. ಈ ವಸ್ತ್ರಗಳನ್ನು ಜಾತ್ರೆಯ ಸಂದರ್ಭದಲ್ಲಿ ಮಾತ್ರ ಶ್ಯಾಲನ್ನು ಭದ್ರವಾಗಿಟ್ಟಿರುತ್ತಾರೆ. ಇದನ್ನು ಕೊಳೆಯಾಗದಂತೆ ಜೋಪಾನಮಾಡುತ್ತಾರೆ.

ದೇವರ ತೊಡುಗೆಯಲ್ಲಿಯೂ ಸಹ ಚಿನ್ನ, ಬೆಳ್ಳಿ, ತಾಮ್ರ ಮತ್ತು ಲೋಹದಿಂದ ಮಾಡಿದಂತಹ ಮರಿಸ್ವಾಮಿ ದೇವರ ಆಕೃತಿಗಳನ್ನು ಮಾಡಿದ್ದಾರೆ. ಈ ತರಹದ ಆಭರಣಗನ್ನು ಭಕ್ತಾದಿಗಳು ಹೆಚ್ಚಿನದಾಗಿ ಮಾಡಿಸಿದ್ದಾರೆ. ಮರಿಸ್ವಾಮಿದೇವರ ಕೀರಿಟ, ಕಣ್ಣು, ಮೀಸೆ, ವಿಭೂತಿಬೊಟ್ಟು, ಹಾಗೂ ಇಬ್ಬರು ದ್ವಾರಪಾಲಕರ ಮೂರ್ತಿಗಳು ಸಹ ಬೆಳ್ಳಿಂದ ಮಾಡಿರುವಂತವು. ಹೀಗೆ ಭಕ್ತಾದಿಗಳು ಸುಮಾರು ೨೦೦೨ನೇ ಸಾಲಿನಲ್ಲಿ ಭೈರಾಪುರ ಬಜ್ಜಣ್ಣ ಎಂಬುವವರು ಸುಮಾರು ಅರ್ಧ ಕೆ.ಜಿ. ಚಿನ್ನದ ಮುಖದ ಮೂರ್ತಿಯನ್ನು ಮಾಡಿಸಿದ್ದಾರೆ. ಹಾಗೂ ತಾಮ್ರದಿಂದ ಮಾಡಿದಂತಹ ನಾಗರ ಹೆಡೆಯು ಸಹ ಮರಿಸ್ವಾಮಿ ದೇವರ ತಲೆಯ ಮೇಲೆ ಹೆಡೆಎತ್ತಿಯಾಡುತ್ತಿರುವ ರೀತಿಯಲ್ಲಿ ಮೂರ್ತಿಯನ್ನು ಮಾಡಿಸಿದ್ದಾರೆ.ಹಾಗೆಯೇ ಮರಿಸ್ವಾಮಿ ದೇವರ ದೀಪದ ಸ್ಥಂಭಗಳು ಸಹ ಬೆಳ್ಳಿಂದಲೇ ಮಾಡಿಸಿದವು. ಇವು ಸುಮಾರು ಎರಡು ಅಡಿ ಎತ್ತರದವುಗಳಾಗಿವೆ. ಇವುಗಳಲ್ಲದೆ ಪೂಜಾ ಸಾಮಗ್ರಿಗಳಾದ ಗಂಟೆ, ಆರತಿತಟ್ಟೆ, ಲೋಭಾನ ಕುಂಡಿ ಇತ್ಯಾದಿಗಳು ತಾಮ್ರದ ಲೋಹದಿಂದ ಮಾಡಿದವು. ಈರೀತಿಯಲ್ಲಿ ಮರಿಸ್ವಾಮಿಯ ಉಡುಗೆ ತೊಡುಗೆಗಳನ್ನು ಹಾಕಿದ್ದಾರೆ.

## ದೈನಂದಿನ ಆಚರಣೆ

ಅರ್ಚಕ ಬೆಳಿಗ್ಗೆ ಐದು ಗಂಟೆಗೆ ಎದ್ದು ಮೊದಲು ತಾನು ಶುದ್ಧವಾಗಿ ನಂತರ ದೇವಸ್ಥಾನದ ಗರ್ಭಗುಡಿಯಿಂದ ಹೊರಗಿನವರೆಗೂ ಶುಭ್ರವಾಗಿ ಕಸಗೂಡಿಸಿ ನೀರನ್ನು ಚಿಮ್ಮಿಸಿ ದೇವರಿಗೆ ಮೂಖ ತೊಳೆದು ಊದುಬತ್ತಿಯನ್ನು ಹಚ್ಚಿ ನಂತರ ಸುಪ್ರಭಾತ ಮತ್ತು ಭಕ್ತಿ ಗೀತೆಗಳನ್ನು ಹಾಕುತ್ತಾರೆ. ಇದರಿಂದ

ಊರಿನ ಜನಬೆಳಗಾಗಿದೆ ಎಂದು ಎದ್ದು ದಿನನಿತ್ಯದ ಕಾರ್ಯಗಳಲ್ಲಿ ತೊಡಗುತ್ತಾರೆ. ಈ ಊರಿನ ಜನರನ್ನು ನಿದ್ರೆಯಿಂದ ಎಚ್ಚರಿಸುವ ಕೆಲಸವನ್ನು ಈ ಧ್ವನಿವರ್ಧಕ ಮಾಡುತ್ತದೆ.

ಜನರು ಯಾವ ಯಾವ ಕೆಲಸಗಳ ಆಧಾರದ ಮೇಲೆ ಇರುವರೋ ಅವರು ಆಯಾ ಕೆಲಸಗಳಿಗೆ ಮಗ್ನರಾಗಲು ಮುಂದಾಗುತ್ತಾರೆ. ಇದೊಂದು ರೀತಿಯ ಗಡಿಯಾರವಿದ್ದಂತೆ, ಗ್ರಾಮೀಣ ಜನರು ಹಗಲೆಲ್ಲಾ ಕಷ್ಟಪಟ್ಟು ಬೆವರು ಸುರುಸಿ ದುಡಿದಂತಹ ದೇಹ ದಣಿವಾರಿಸಿಕೊಳ್ಳುವಂತಹ ಸಂದರ್ಭ ಅಂದರೆ ಸಾಯಂಕಾಲ ಸುಮಾರು ಆರು ಗಂಟೆಗೆ ಗುಡಿಯ ಒಳಗಿನಿಂದ ಹೊರಗಿನವರೆಗೆ ಶುದ್ಧಮಾಡಿ, ನೀರನ್ನು ಚಿಮ್ಮಿಸಿ ದೇವರಿಗೆ ದೀಪ, ಊದುಬತ್ತಿ ಹಚ್ಚಿ ಮತ್ತೇ ಭಕ್ತಿಗೇತೆಗಳನ್ನು ಹಾಕುವುದು ಇದರಿಂದ ಹೊಲಗಳಲ್ಲಿ ಕೆಲಸ ಮಾಡುವಂತಹ ಜನರು ಕೆಲಸಕಾರ್ಯಗಳನ್ನು ಮುಕ್ತಾಯಗೊಳಿಸಿ ದನ, ಕರು, ಆಡು, ಇತ್ಯಾದಿ ಪ್ರಾಣಿಗಳು ಸಹ ಮನೆಗೆ ಹಿಂದಿರುಗುವುದು. ಇಂತಹ ಒಂದು ಸಂದರ್ಭದಲ್ಲಿ ದಣಿದು ಬಂದ ರೈತರು, ಕಾರ್ಮಿಕರು, ಕೂಲಿಕಾರರು ದೇವಸ್ಥಾನದಲ್ಲಿ ಕೂತು ಹಾಡುಗಳನ್ನು ಭಕ್ತಿಗೀತೆಗಳನ್ನು, ಜಾನಪದ ಗೀತೆಗಳನ್ನು, ದೇವರ ಸ್ತುತುಗೀತೆಗಳನ್ನು ಕೇಳುತ್ತಾರೆ.

## ವಾರದ ಪೂಜೆ

ವಾರದ ಸಂದರ್ಭದಲ್ಲಿಯೂ ಸ್ವಲ್ಪ ವಿಶೇಷವಾಗಿ ಪೂಜೆ ಪುನಸ್ಕಾರ ಮಾಡುತ್ತಾರೆ. ಶ್ರೀಮರಿಸ್ವಾಮಿದೇವರ ವಾರ ಸೋಮವಾರ ಮತ್ತು ಶುಕ್ರವಾರವೆಂದು ಹೇಳುತ್ತಾರೆ. ಹೆಚ್ಚನದಾಗಿ ಸೋಮವಾರವೇ ಜನರು ಹೆಚ್ಚಾಗಿ ಪೂಜೆ ಅಭಿಷೇಕ ಮಾಡಿಸುತ್ತಾರೆ. ಆ ದಿನದಂದು ದೇವರಿಗೆ ತುಂಬಿದ ಕೊಡದ ನೀರಿನಿಂದ ಮುಖವನ್ನು ತೊಳೆದು ವಿಭೂತಿ, ಕುಂಕುಮ, ಗಂಧ, ಹೂವಿನಹಾರಗಳಿಂದ ಪೂಜಿಸಿ ಪ್ರಸಾದ, ಹಾಗೂ ತೀರ್ಥದನೀರನ್ನು ಬಂದ ಭಕ್ತಾದಿಗಳೆಲ್ಲರಿಗೂ ಕೊಡುತ್ತಾರೆ. ಆ ದಿನದಂದು ದೇವರಿಗೆ ಹಾಕಿರುವ ಉಡುಗೆ ತೊಡುಗೆಗಳು ಬೆಲೆ ಬಾಳುವಂತವುಗಳಾಗಿರುತ್ತವೆ. ಇವುಗಳನ್ನು ಶುಭ್ರವಾಗಿ ತೊಳೆದು ಮಡಿಂದ ಕೂಡಿದ ಬಟ್ಟೆಗಳನ್ನು ಮಾತ್ರ ಉಡಿಸುತ್ತಾರೆ.

ಮರಿಸ್ವಾಮಿಯ ವಾರ ಸೋಮವಾರವಾಗಿರುವುದರಿಂದ ಆ ದಿನದಂದು ಸುತ್ತಮುತ್ತಲಿರುವ ಗ್ರಾಮಗಳ ಭಕ್ತರು ಬಂದು ದೇವರಿಗೆ ಪೂಜೆ, ಪುನಸ್ಕಾರಗಳನ್ನು ಮಾಡಿಸುವುದು ಸಾಮಾನ್ಯವಾಗಿದೆ. ಆ ದಿನದಂದು ರೈತರು ಯಾರೂ ವ್ಯವಸಾಯಕ್ಕೆಂದು ಎತ್ತುಗಳನ್ನು ಹೂಡುವುದಿಲ್ಲ. ಅಂದು ಸೋಮವಾರ ಬಸವಣ್ಣನವಾರ ಎಂಬುದು ಅಲ್ಲಿಯ ಜನರ ನಂಬಿಕೆ. ಆದ್ದರಿಂದ ಎತ್ತುಗಳನ್ನು ಸ್ನಾನ ಮಾಡಿಸಿ ಪೂಜೆ ಮಾಡುವುದು ವಾಡಿಕೆಯಲ್ಲಿದೆ.

### ಅಮವಾಸ್ಯೆ ದಿನದ ಆಚರಣೆ

ಅಮವಾಸ್ಯೆ ದಿನದಂದು ಮರಿಸ್ವಾಮಿದೇವರಿಗೆ ವಿಶೇಷ ರೀತಿಯ ಪೂಜೆಯು ನಡೆಯುತ್ತದೆ. ಅಂದು ಹರಕೆ ಯೊತ್ತ ಭಕ್ತರು ದೇವರಿಗೆ ಅಭಿಷೇಕ ಮಾಡಿಸುತ್ತಾರೆ. ಅಭಿಷೇಕಕ್ಕೆ ಬೇಕಾದ ಎಲ್ಲಾ ಪೂಜಾ ಸಾಮಗ್ರಿಗಳನ್ನು ಕ್ರೊಢಿಕರಿಸಿಕೊಂಡು ಮಡಿಉಡುಂದ ದೇವಸ್ಥಾನವನ್ನು ತೊಳೆದು ತುಂಬಿದಕೊಡದ ನೀರಿನಿಂದ ದೇವರನ್ನು ತೊಳೆದು ಶೃಂಗಾರ ಮಾಡಿ ಅಬಿಷೇಕ ಕಾರ್ಯವನ್ನು ಮಾಡುತ್ತಾರೆ. ಅಭಿಷೇಕ ಮುಗಿಯುವವರೆಗೂ ಭಕ್ತಾದಿಗಳು ಉಪವಾಸ ವ್ರತವನ್ನು ಮಾಡುತ್ತಾರೆ. ಅಲ್ಲಿಯವರೆಗೂ ಬಾಯಲ್ಲಿ ಒಂದು ಹನಿ ನೀರನ್ನು ಸಹ ಹಾಕದೇ ಪೂಜೆ ಮುಗಿದ ನಂತರ ದೇವರ ಪ್ರಸಾದವನ್ನು ತೆಗೆದುಕೊಳ್ಳುತ್ತಾರೆ. ಆ ದಿನದಂದು ಸುತ್ತಮುತ್ತಲಿನ ಗ್ರಾಮಗಳ ಭಕ್ತಾದಿಗಳು ನಡೆದುಕೊಂಡು ಶ್ರೀಮರಿಸ್ವಾಮಿ ದೇವಸ್ಥಾನಕ್ಕೆ ಬಂದು ತಮ್ಮ ಭಕ್ತಿಯನ್ನು ದೇವರಿಗೆ ಅರ್ಪಿಸುತ್ತಾರೆ. ಹೂವು, ಹಣ್ಣು, ಕಾು, ಕರ್ಪೂರ, ಊದಬತ್ತಿಗಳನ್ನು ದೇವರ ಸನ್ನಿದಿಗೆ ಅರ್ಪಿಸಿ, ನಂತರ ಪ್ರಸಾದಕ್ಕಾಗಿ ಸಿಹಿಯಾದ ಹುಗ್ಗಿ, ಹೋಳಿಗೆ, ಅನ್ನ, ಪಲ್ಯೆ ಇತರೇ ಅಡಿಗೆಯನ್ನು ಮಾಡಿ ಅರ್ಪಿಸುವುದು ಹಿಂದಿನಿಂದಲೂ ಬಂದ ಸಂಪ್ರದಾಯವಾಗಿದೆ.

ಅಮವಾಸ್ಯೆಯಂದು ಚಂದ್ರನು ಉದುಸುವುದಿಲ್ಲವಾದ್ದರಿಂದ ರಾತ್ರಿ ಕತ್ತಲೆ ಆವರಿಸಿರುತ್ತದೆ. ಆ ದಿನದಂದು ದೇವಸ್ಥಾನದಲ್ಲಿ ಔಡಲ ಎಣ್ಣೆಯಿಂದ ದೀಪವನ್ನು ಹಚ್ಚಿ ಇಡೀ ರಾತ್ರಿ ದೀಪ ಆರದಂತೆ ಎಚ್ಚರವಹಿಸುತ್ತಾರೆ. ಯಾವುದೇ ಕಾರಣಕ್ಕೂ ದೀಪ ಆರಬಾರದು, ದೀಪ ಆರಿದರೆ ಆ ಊರಿಗೆ ಅನಿಷ್ಟ ಬರುತ್ತದೆ ಎಂಬ ನಂಬಿಕೆ ಆ ಭಕ್ತಾದಿಗಳಲ್ಲಿ ಹಿಂದಿನಿಂದಲೂ ಬೆಳೆದು ಬಂದಿರುವುದರಿಂದ ಇಡೀ ರಾತ್ರಿ ದೀಪ ಆರದಂತೆ ನೋಡಿಕೊಳ್ಳುವುದು ಆ ಭಕ್ತಾದಿಗಳ ಮುಖ್ಯ ಜವಬ್ದಾರಿಯಾಗದೆ. ಆ ಕತ್ತಲೆಯ ರಾತ್ರಿಯಲ್ಲಿ ದೀಪದ ಬೆಳಕಿಗೆ ಮರಿಸ್ವಾಮಿದೇವರ ಮೂರ್ತಿ ಹೊಳೆಯುತ್ತಿರುತ್ತದೆ. ಅಮವಾಸ್ಯೆ ದಿನವು ಮಾಟ, ಮೋಡಿ, ಮಂತ್ರ ಮಾಡುವವರಿಗೆ ಒಳ್ಳೆಯ ದಿನವಾಗಿರುತ್ತದೆ. ಅಂದು ಆ ಊರಿನ ಜನರಿಗೆ ವಿಶೇಷವಾಗಿ ಮಕ್ಕಳಿಗೆ ಆರೋಗ್ಯ ಸರಿಇಲ್ಲವೆಂದರೆ ಆ ದಿನದಂದು ದೇವಸ್ಥಾನಕ್ಕೆ ಬಂದು ನೀರನ್ನು ಹಾಕಿಸಿಕೊಳ್ಳುವುದು. ತಾಯತ ಕಟ್ಟಿಸುವುದು, ನಿಂಬೆಹಣ್ಣನ್ನು ಮಂತ್ರಿಸಿ ಕೊಡುವುದು ಮನೆಯ ಶಾಂತಿಗಾಗಿ ಅಂತರಗಾು ಕಟ್ಟಿಸುವುದು. (ತೆಂಗಿನಕಾುಯನ್ನು ಮರದಿಂದ ಭೂಮಿಗೆ ಬೀಳಿಸದಂತೆ ತಂದು ಮಂತ್ರಿಸಿ, ಪೂಜಿಸಿ ಮನೆಯ ತೊಲೆಬಾಗಿಲಿಗೆ ಕಟ್ಟುವುದನ್ನು ಅಂತರ್‌ಗಾು ಎನ್ನುವರು) ಈ ರೀತಿಯಾಗಿ ಅಮವಾಸ್ಯೆಯ ದಿನದಂದು ಒಳ್ಳೆಯ ದಿನವೆಂದು ಬಾವಿಸಿ, ದೇವರ ಕಾರ್ಯಕ್ರಮಗಳನ್ನು ಈ ರೀತಿಯಾಗಿ ಮಾಡುತ್ತಾರೆ.

### ಹುಣ್ಣಿಮೆ ದಿನದ ಆಚರಣೆ

ಅಮವಾಸ್ಯೆಯ ದಿನದಂದು ಯಾವ ರೀತಿಯಾಗಿ ಆಚರಣೆ ಮಾಡುತ್ತಾರಯೋ ಅದೇ ರೀತಿಯಾಗಿ ಹುಣ್ಣಿಮೆಯ ದಿನದಂದು ಸಹ ಪೂಜೆ ಪುನಸ್ಕಾರಗಳ ಆಚರಣೆಗಳನ್ನು ಮಾಡುತ್ತಾರೆ. ಮಾಸಿಕದ ಅವಧಿಯಲ್ಲಿ ಅಮವಾಸ್ಯೆ ಮತ್ತು ಹುಣ್ಣಿಮೆಗಳು ಬರುತ್ತವೆ. ಇಂತಹ ಸಂದರ್ಭಗಳಲ್ಲಿ ದೇವರ ಹರಕೆಯನ್ನು ಹೊತ್ತಿರುವವರು ಅಂದು ತೀರಿಸುತ್ತಾರೆ. ಅಂದರೆ ಅರ್ಪಿಸುತ್ತಾರೆ. ಈ ದಿನದಂದು ಅರ್ಚಕರು

ದೇವಸ್ಥಾನವನ್ನು ಸ್ವಚ್ಛಗೊಳಿಸಿ, ದೇವರಿಗೆ ಹೂವು, ಹಣ್ಣು, ಕಾಯಿ, ಕರ್ಪೂರಗಳನ್ನು ದೇವರಿಗೆ ಅರ್ಪಿಸಿ ದೇವರಿಗೆ ದೀರ್ಘದಂಡ ನಮಸ್ಕಾರಗಳನ್ನು ಹಾಕುತ್ತಾರೆ. ಹೀಗೆ ಮಾಸಿಕ ಅವಧಿಯಲ್ಲಿ ಎರಡು ಬಾರಿ ದೇವಸ್ಥಾನವನ್ನು ಮಡಿಯಾದ ನೀರಿನಿಂದ ತೊಳೆಯುತ್ತಾರೆ. ಹಾಗೆಯೇ ದೇವರ ಮೇಲಿನ ಉಡುಗೆಗಳನ್ನು ಸಹ ತೊಳೆದು ಅಮವಾಸ್ಯೆ ಮತ್ತು ಹುಣ್ಣಿಮೆಯ ದಿನದಂದು ಈ ರೀತಿಯ ಆಚರಣೆಯನ್ನು ಮಾಡುತ್ತಾರೆ. ಇಲ್ಲಿ ಯಾವುದೇ ರೀತಿಯ ಅಧಿಕಾರ ಚಲಾವಣೆ ಇರುವುದಿಲ್ಲ. ಹೀಗಾಗಿ ಇಲ್ಲಿ ಯಾವುದೇ ಜಾತಿ, ಜನಾಂಗವೆಂಬ ಬೇದ, ಭಾವ ಇಲ್ಲದೇ ಒಂದಾಗಿ ದೇವರ ಅರ್ಚನೆಗೆ ಶುದ್ಧ ಭಾವನೆಯಿಂದ ದೇವರ ಸನ್ನಿದಿಗೆ ಬಂದು ಹೋಗುತ್ತಾರೆ.

### ಜೀವನಾವರ್ತನ ಸಂದರ್ಭದಲ್ಲಿ

ಮನುಷ್ಯನು ಜೀವಿತಾವಧಿಯ ಸಂದರ್ಭದಲ್ಲಿ ದೇವರಿಗೆ ಯಾವ ರೀತಿಯ ಆಚರಣೆಗಳನ್ನು ಮಾಡುತ್ತಾನೆ ಅವನು ಹುಟ್ಟು ಸಾವಿನ ಬದುಕಿನ ಮಧ್ಯೆ ಆಚರಿಸುವಂತಹ ಆಚರಣೆಗಳನ್ನು ಜೀವನಾವರ್ಥನಾ ಆಚರಣೆಗಳೆಂದು ಕರೆಯುತ್ತಾರೆ. ಮಾನವನ ಬದುಕಿನ ಕ್ರಿಯಾಚರಣೆಗಳು ಅವನನ್ನು ಎಡಬಿಡದೇ ಪಾಲಿಸುತ್ತವೆ. ಮಗುವು ಜನನವಾದಂತಹ ಸಂದರ್ಭದಲ್ಲಿ ದೇವರ ಗುಡಿಗೆ ಹೋಗುವಂತಹ ಸಂಪ್ರದಾಯ ಅದರಲ್ಲೂ ಹರಕೆ ಹೊತ್ತವರು ಹರಕೆಯನ್ನು ಒಪ್ಪಿಸಲು ಅಂದು ವಿಶೇಷ ಪೂಜೆಯನ್ನು ಮಾಡಿಸುತ್ತಾರೆ. ಆ ದಿನದಂದು ದೇವರಿಗೆ ಉಡುಗೆ ತೊಡುಗೆಗಳು ವಿಶೇಷವಾಗಿ ಹಾಕಿ ಅಂದು ಎಲೆಪೂಜೆಯನ್ನು ಮಾಡಿಸುತ್ತಾರೆ.

ನಾಮಕರಣದ ಸಂದರ್ಭದಲ್ಲಿಯೂ ಕೂಡ ದೇವಸ್ಥಾನಕ್ಕೆ ಹೋಗಿ ಅರ್ಚಕರಿಗೆ ಹೇಳಿ ಪೂಜೆಯನ್ನು ವಿಶೇಷವಾಗಿ ಮಾಡಿಸುತ್ತಾರೆ. ಅಂದು ದೇವರಿಗೆ ಪುನಃ ಪೂಜೆಯನ್ನು ಮಾಡಿ ಹಣ್ಣು, ಹೂವು, ಕಾಯಿ, ಪೂಜೆಯನ್ನು ಮಾಡಿಸಿ ಮಗುವಿನ ಮೇಲೆ ತೀರ್ಥದ ನೀರನ್ನು ಹಾಕಿಸಿ ಅರ್ಚಕರಿಂದಲೇ ಮಗುವಿನ ಎಲೆಕತ್ತರಿಯನ್ನು ಹಾಕಿಸಿ ಸಂಬಂಧಿಕರೊಂದಿಗೆ ಒಟ್ಟಾರೆಯಾಗಿ ದೇವಸ್ಥಾನಕ್ಕೆ ಬಂದು ಪೂಜೆ ಮಾಡಿಸುತ್ತಾರೆ. ಹಾಗೆಯೇ ಅಂದು ಅನ್ನದಾಸೋಹ ಮಾಡಿಸುತ್ತಾರೆ. ಏಕೆಂದರೆ ಅಂದು ದೇವರ ಹೆಸರಿನಲ್ಲಿ ನಾಮಕರಣವನ್ನು ಮಾಡುವುದುಂಟು. ಮಗುವುಕಿರಚಾಟ ತಾಗೆ ಹಾಲು ಇಲ್ಲದಿರುವುದು, ಮಕ್ಕಳಿಗೆ ಕಾಲೆ ಬಂದಾಗ ನಿವಾರಣೆಗಾಗಿ ಇಂತಹ ಹರಕೆಗಳನ್ನು ಹೊತ್ತು ದೇವರ ಹೊಣೆಯಾಗುವುದು. ಒಟ್ಟಿನಲ್ಲಿ ಮನುಷ್ಯನ ನಾಮಕರಣ ಸಂದರ್ಭದಲ್ಲಿಯೂ ಸಹ ದೇವರಿಗೆ ಅಂದು ವಿಶೇಷ ಆಚರಣೆಗಳನ್ನು ಮಾಡುವುದರ ಮೂಲಕ ನಾಮಕರಣ ಮಾಡುವುರು.

ಜವಳಿಕಾರ್ಯಕ್ರಮದ ಸಂದರ್ಭದಲ್ಲಿಯೂ ಸಹ ಈ ಕಾರ್ಯಕ್ರಮವನ್ನು ದೇವರ ಪ್ರೀಯ ವಾರವಾದಂತಹ ಸೋಮವಾರದಂದೇ ಪೂಜೆಯನ್ನು ಮಾಡಿಸುತ್ತಾರೆ. ಈ ಕಾರ್ಯಕ್ರಮಕ್ಕೆ ಹಿಂದಿನ ದಿನವೇ ಅರ್ಚಕರಿಗೆ ಮುನ್ನೆಚ್ಚರಿಕೆಯಾಗಿ ಹೇಳುವುದು. ಅಂದುಅರ್ಚಕ ದೇವರಿಗೆ ಮುಖವನ್ನು ತೊಳೆದು

ಆಭರಣಗಳನ್ನು ಹಾಕಿ ಅಂದು ನೆಲವರೆಸಿ ಪೂಜೆಯನ್ನು ಮಾಡಿರುತ್ತಾನೆ ನಂತರ ಬಂದ ಜವಳಿ ಕಾರ್ಯಕ್ರಮದ ಭಕ್ತರು ಮತ್ತೊಂದು ಸಾರಿ ಅವರು ತಂದಂತಹ ಪೂಜಾ ಸಾಮಗ್ರಿಗಳಿಂದ ಪುನಃ ಪೂಜೆ ಮಾಡಿ ಜವಳಿಕಾರ್ಯಕ್ರಮಕ್ಕೆ ಮುಂದಾಗುತ್ತಾರೆ. ಈ ರೀತಿಯಾಗಿ ಜವಳಿ ಕಾರ್ಯಕ್ರಮ ಸಂದರ್ಭದಲ್ಲಿಯೂ ದೇವರಿಗೆ ಉಡುಗೆ ತೊಡುಗೆ ತೊಡಿಸುವುದರ ಮೂಲಕ ದೇವರನ್ನು ಪೂಜಿಸುವರು. ಯಾರಾದರೂ ಊರಲ್ಲಿ ಮರಣ ಹೊಂದಿದಂತಹ ಸಂದರ್ಭದಲ್ಲಿಯೂ ದೇವರ ಗುಡಿಯ ಹತ್ತಿರ ಶವಸಂಸ್ಕಾರ ಮಾಡಿದ ನಂತರ ಪೂಜೆ ಮಾಡಿಸುತ್ತಾರೆ. ಆದಿನ ಬಿಟ್ಟರೇ ಮತ್ತೇ ಹದಿನಾರು ದಿನದ ತನಕ ಗುಡಿಯ ಹತ್ತಿರ ಹೋಗುವುದೇ ಇಲ್ಲ ಏಕೆಂದರೆ ಇದೊಂದು ಅನಿಷ್ಟ ಕಾರ್ಯಕ್ರಮವಾದ್ದರಿಂದ ದೇವರಿಗೆ ಮೈಲಿಗೆಯಾಗಬಹುದೆಂಬ ಉದ್ದೇಶದಿಂದ ದೇವರ ಗುಡಿಗೆ ಹೋಗುವುದೇ ಇಲ್ಲ. ಕೇವಲ ಅರ್ಚಕ ಮಾತ್ರ ಇರುತ್ತಾನೆ. ಅವರು ಸಹ ಹದಿನಾರನೇ ದಿನದಂದು ದೇವರ ಮೇಲಿನ ಉಡುಗೆ ತೊಡುಗೆಗಳನ್ನು ತೆಗೆದು ತೊಳೆದು ಪುನಃ ಉಡಿಸುತ್ತಾರೆ.

### ವಾರ್ಷಿಕಾವರ್ತನಾ ಆಚರಣೆ

ವಾರ್ಷಕಾವರ್ತನೆಯಲ್ಲಿ ಹಬ್ಬ, ಜಾತ್ರೆ, ಅಮವಾಸ್ಯೆ, ಹುಣ್ಣಿಮೆಯ ದಿನಗಳಲ್ಲಿಯೂ ಸಹ ದೇವರನ್ನು ವಿಶೇಷವಾಗಿ ಕಾಣುವುದನ್ನು ನಾವು ನೋಡಿದ್ದೇವೆ. ಹಬ್ಬಗಳ ಸಂದರ್ಭದಲ್ಲಿಯೂ ಸಹ ದೇವರನ್ನು ಅಂದು ಹೊಸಬಟ್ಟೆ ಹಾಕುವುದರ ಮೂಲಕ ತೆಗೆದಿಟ್ಟಿರುವ ಆಭರಣಗಳನ್ನು ಹಬ್ಬದಂದು ಹಾಕಿ ಪೂಜಿಸುತ್ತಾರೆ. ಅದೇ ರೀತಿ ಜಾತ್ರೆಯ ಸಂದರ್ಭದಲ್ಲಿ ದೇವರ ಉಡುಗೆ ತೊಡುಗೆಗಳು ಪ್ರತಿನಿತ್ಯಕ್ಕಿಂತಲೂ ಅಂದು ಬಹಳ ಬೆಲೆ ಬಾಳುವಂತಹ ಉಡುಪು ಮತ್ತು ತೊಡುಗೆಗಳನ್ನು ಹಾಕುತ್ತಾರೆ. ರೇಷ್ಮೆಪಂಚೆ, ಜರತಾರು ಪೇಟಾ, ಬೆಳ್ಳಿ ಮುಖ, ಬಂಗಾರದ ಛತ್ರಿ ಈ ರೀತಿಯ ಆಭರಣಗಳನ್ನು ಹಾಕಿ ಕಂಗೊಳಿಸುವಂತೆ ಮಾಡುತ್ತಾರೆ. ಬಣ್ಣ ಬಣ್ಣದ ಛತ್ರಿಯನ್ನು ಅಂದು ಬಿಚ್ಚಿ ದೇವರ ಗರ್ಭಗುಡಿಯ ತುಂಬಾ ಬೆಳಕಿನ ವ್ಯವಸ್ಥೆ ಮಾಡುತ್ತಾರೆ. ಏಕೆಂದರೆ ಅಂದು ಬೇರೆ ಬೇರೆ ಊರುಗಳಿಂದ ಯಾತ್ರಿಕರು ಜಾತ್ರೆಯ ವೀಕ್ಷಣೆಗೆ ಬಂದಿರುತ್ತಾರೆ. ಆದ್ದರಿಂದ ಅಂದು ಬೆಲೆ ಬಾಳುವಂತಹ ಆಭರಣಗಳನ್ನು ಲೇಪನಮಾಡಿಸಿ ಅವುಗಳನ್ನು ಗಂಗೆಯಲ್ಲಿ ತೊಳೆದು ಆಭರಣಗಳನ್ನು ತೊಡಿಸುತ್ತಾರೆ. ಮದುವೆಯಲ್ಲಿ ಮದುಮಗಳು ಯಾವ ರೀತಿಯಾಗಿ ಕಂಗೊಳಸುತ್ತಾಳೆಯೋ ಹಾಗೆಯೇ ಜಾತ್ರೆಯ ದಿನದಂದು ಮರಿಸ್ವಾಮಿ ದೇವರು ಈ ರೀತಿಯಾಗಿ ಕಂಗೊಳಿಸುತ್ತಾನೆ.

## ೨ ಶಿಲ್ಪ

ಮರಿಸ್ವಾಮಿ ದೇವರ ಶಿಲ್ಪಿ ಬಹಳಕಾಲದ ಹಳೆಯದಾಗಿದೆ. ಇದು ಕಪ್ಪು ಬಣ್ಣದಿಂದ ಕೂಡಿದ್ದಾಗಿದ್ದು, ಬಸವೇಶ್ವರನ ಹೋಲಿಕೆ ಹೋಲುವಂತದ್ದಾಗಿದೆ. ಆದರೆ ಕೆಲವು ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಈ ಮರಿಸ್ವಾಮಿ ದೇವರು ಉದ್ದನೆಯ ಮೀಸೆಯನ್ನು ಹೊಂದಿದ್ದಾನೆ. ಬೆಳ್ಳಿಯ ಕೀರೀಟವನ್ನು ಧರಿಸಿ ಹಿಂದುಗಡೆ ನಾಗರ ಹೆಡೆಯನ್ನು ಎತ್ತಿ ಹಾಡುವ ಹಾವಿನ ಮೂರ್ತಿಯು ಸಹ ಇದೆ. ಅಕ್ಕಪಕ್ಕದಲ್ಲಿ ದ್ವಾರಪಾಲಕರ ಮೂರ್ತಿಗಳನ್ನು ಸಹ ಕಾಣಬಹುದು. ಇವು ಸಹ ಬೆಳ್ಳಿಯಿಂದ ಮಾಡಲ್ಪಟ್ಟಿದ್ದು, ಮರಿಸ್ವಾಮಿಯ ಮೂರ್ತಿಯು ಮಾತ್ರ ಶಿಲೆಯಿಂದ ಕೂಡಿದ್ದಾಗಿದೆ. ಇವೆಲ್ಲಾ ಅಂಶಗಳನ್ನು ಗಮನಿಸಿದಾಗ ಈತ ಒಬ್ಬ ಸಾಂಸ್ಕೃತಿಕ

ನಾಯಕನಾಗಿದ್ದಾನೆ ಎಂದು ತಿಳಿದು ಬರುತ್ತದೆ. ಈತನ ಪುರಾಣದಲ್ಲಿ ಅವಲೋಕಿಸಿದಾಗ ಮರಿಸ್ವಾಮಿ ದನಗಳನ್ನು ಕಾಯುವ ಕೆಲಸ ಸಹ ಮಾಡಿದ್ದಾನೆ. ಎಂದು ಅವುಗಳನ್ನು ಅಪಹರಿಸಿರುವವರ ವಿರುದ್ಧ ಹೋರಾಡಿ ಅವರನ್ನು ಸಂಹರಿಸಿ ಪಶುಗಳನ್ನು ಕಾಪಾಡಿದ್ದಾನೆಂದು ತಿಳಿದುಬರುತ್ತದೆ. ಏಕೆಂದರೆ ಮರಿಸ್ವಾಮಿ ಕಾಲಂಚಿನಲ್ಲಿ ಒಬ್ಬ ರಾಕ್ಷಸನ ಚಿತ್ರವಿದೆ. ಇದರ ಆಧಾರದ ಮೇಲೆಯೂ ಸಹ ಇವರೊಬ್ಬ ಸಾಂಸ್ಕೃತಿಕ ವೀರ ಎಂತಲೂ ಗುರುತಿಸಬಹುದಾಗಿದೆ.

## ವಾಸ್ತು

ಮರಿಸ್ವಾಮಿ ದೇವರ ಮೂಲ ಸ್ಥಾನ ಬಳ್ಳಾರಿಎನ್ನಬಹುದು. ಏಕೆಂದರೆ ಬಳ್ಳಾರಿಯೂ ಸಹ ಈ ಮರಿಸ್ವಾಮಿದೇವರ ಮಠವಿದೆ. ಈ ಮರಿಸ್ವಾಮಿಯು ಕೇವಲ ಒಂದು ಕಡೆ ನೆಲೆನಿಲ್ಲದೇ ಮೂರು ಕಡೆ ನೆಲೆಸಿರುವುದು ಇಂದಿಗೂ ಪುರಾವೆಗಳಿವೆ. ಈ ಮರಿಸ್ವಾಮಿ ದೇವರ ಪುರಾಣಗಳನ್ನು ಓದಿದಾಗ ಅವರ ಹುಟ್ಟು, ಅವರ ಬೆಳವಣಿಗೆ ಅವರ ನೆಲೆ, ಪವಾಡಗಳನ್ನು ಗಮನಿಸಬಹುದು. ಮೊದಲಿಗೆ ಮರಿಸ್ವಾಮಿ ಬಳ್ಳಾರಿಯಿಂದ ಸುಮಾರು ಐವತ್ತು ಕಿ.ಮೀ. ದೂರದಲ್ಲಿ ಇರುವ ಭೈರಾಪುರ ಗ್ರಾಮದಲ್ಲಿ ಬಂದು ನೆಲೆಸಿರುವನೆಂದು ಪುರಾಣ, ಮತ್ತು ಜನಪದರ ಕಲ್ಪನೆಯು ಸಹ ಆಗಿದೆ. ಈಗಲೂ ಸಹ ಜಾತ್ರೆಯ ಸಂದರ್ಭದಲ್ಲಿ ಬಳ್ಳಾರಿಯಿಂದ ಹಲವಾರು ಅಲ್ಲಿನ ಆಭರಣಗಳನ್ನು, ಉಡುಪುಗಳನ್ನು ಉಡುಪುಗಳನ್ನು ಹಾಗೂ ಇನ್ನಿತರೇ ವಸ್ತುಗಳನ್ನು ತರುತ್ತಾರೆ. ನಂತರ ಜಾತ್ರೆಯು ಮುಗಿದ ಬಳಿಕ ಮತ್ತೇ ವಾಪಾಸಾಗಿ ಬಳ್ಳಾರಿಗೆ ತೆಗೆದುಕೊಂಡು ಹೋಗುತ್ತಾರೆ.

ಮೊದಲಿಗೆ ಮರಿಸ್ವಾಮಿಯ ಗುಡಿಯು ಚಿಕ್ಕದಾಗಿದೆ. ಅಂದರೆ ನಾನು ಕ್ಷೇತ್ರ ಕಾರ್ಯ ಮಾಡುವಂತಹ ಸಂದರ್ಭದಲ್ಲಿ ಊರಿನ ಹಿರಿಯರನ್ನು ಸಂದರ್ಶಿಸಿದಾಗ ಈ ರೀತಿ ಮಾಹಿತಿ ನೀಡಿದ್ದಾರೆ. ಬಳ್ಳಾರಿ ಮತ್ತು ಭೈರಾಪುರದ ಜನರ ವ್ಯಾಪಾರ ವಹಿವಾಟುಗಳಿಗೆ ಆ ಪಟ್ಟಣಕ್ಕೆ ಹೋಗಬೇಕಾಗಿತ್ತು. ಅಂತಹ ಸಂದರ್ಭದಲ್ಲಿ ವ್ಯಾಪಾರ ಮಾಡಿಕೊಂಡು ತಮ್ಮ ಸ್ವಗ್ರಾಮವಾದ ಭೈರಾಪುರಕ್ಕೆ ಬರುವಂತಹ ಸಮಯದಲ್ಲಿ ಕಳ್ಳಕೋರರು ಅವರನ್ನು ಬೆದರಿಸಿ ಅವರಲ್ಲಿದ್ದ ಸರಕು ಮತ್ತು ಧನವನ್ನು ಕಬಳಿಸಲು ಬಂದಾಗ ಮರಿಸ್ವಾಮಿಯು ಅವರನ್ನು ಹಿಮ್ಮೆಟ್ಟಿಸಿ ತನ್ನ ಭಕ್ತರನ್ನು ಊರಿನವರೆಗೂ ಬಂದು ತಲುಪಿಸಿದನು. ಇದರಿಂದ ಆ ಭಕ್ತರು ಸ್ವಾಮಿ ನೀನು ಇಲ್ಲೇ ನಮ್ಮ ಗ್ರಾಮದಲ್ಲಿ ವಾಸವಾಗಬೇಕೆಂದು ಬೇಡಿಕೊಂಡಾಗ ಇವರ ಭಕ್ತಿಗೆ ಮೆಚ್ಚಿ ಅವರ ಆಪತ್ತುಗಳನ್ನು ಗಮನಿಸಿದ ದೇವರು ಅಂದಿನಿಂದ ಅಲ್ಲಿ ಒಂದು ಚಿಕ್ಕ ಗುಡಿಸಿಲಿನಲ್ಲಿ ವಾಸವಾದನು. ಕಾಲಾಂತರದಲ್ಲಿ ಆ ಗುಡಿಸಲು ಅವನ ಸ್ಥಿತಿಗೆ ಬಂದಾಗ ಅದನ್ನು ಕಿತ್ತಿ ಕಲ್ಲು, ಮಣ್ಣಿನಿಂದ ಗುಡಿಯನ್ನು ಕಟ್ಟಿಸಿದ್ದಾರೆ. ಅದು ಇಂದಿಗೂ ಇದೆ. ನಂತರ ಆ ಗುಡಿಯು ಚಿಕ್ಕದಾದ್ದರಿಂದ ಭಕ್ತರ ಸಂಖ್ಯೆ ಹೆಚ್ಚಾದಂತೆಲ್ಲಾ ಆ ಗುಡಿಯನ್ನು ಹೊಸದಾದ ಗುಡಿಯನ್ನು ನಿರ್ಮಾಣ ಮಾಡಿದ್ದಾರೆ. ಅದು ಈಗ ಬಹಳ ಸುಂದರವಾಗಿದೆ. ಇದಕ್ಕೆ ಯಾವುದೇ ರೀತಿಯ ಕಟ್ಟಿಗೆ ಬಳಸದೇ ಕೇವಲ ಕಲ್ಲಿನಿಂದ ಕಟ್ಟಿರುವಂತಹ ಗುಡಿಯಾಗಿದೆ. ಈ ದೇವರ ಪೂಜೆ ಪುನಸ್ಕಾರ ಹಾಗೂ ಭಕ್ತರಿಗೆ ಅನ್ನಸಂತರ್ಪಣೆ ಮಾಡಲು ಅಡುಗೆಮನೆ, ಅರ್ಚಕರಮನೆ, ಕುಡಿಯಲು ನೀರಿನಬಾವಿ, ನಿರ್ಮಾಣಗೊಂಡಿವೆ. ಇಂತಹ ಕಾಮಗರಿ ಕೆಲಸ ಮಾಡಿದಂತಹ

ಸಂದರ್ಭದಲ್ಲಿ ಉಳಿದ ಹಣವನ್ನು ಮುಸ್ಲಿಂರ ನೆನಪಿಗಾಗಿ ಅವರಿಗೆ ಒಂದು ಗುಡಿಯನ್ನು ಅದೇ ಜಾಗದಲ್ಲಿ ನಿರ್ಮಾಣ ಮಾಡಿದ್ದಾರೆ. ಒಟ್ಟಾರೆ ದೇವರಗುಡಿ ವಾಸ್ತವವಾಗಿಇಚೀನ ದೇವಾಲಯಗಳಂತೆ ಇಲ್ಲಿಯೂ ಸಹ ವಿಜೃಂಭಣೆಯಿಂದ ಕೂಡಿದೆ. ಇದಕ್ಕೆ ಗರ್ಭದಗುಡಿ ಹೊರಗಡೆ ಭಕ್ತರಿಗಾಗಿ ವಿಶಾಲವಾದ ಹಾಲಿದೆ. ಜಾತ್ರೆಯ ಸಂದರ್ಭದಲ್ಲಿ ಈ ದೇವರ ಗುಡಿಗೆ ವಿವಿಧ ಬಣ್ಣಗಳಿಂದ ಅಲಂಕಾರಗೊಳ್ಳುತ್ತದೆ. ಈ ಎಲ್ಲಾ ಕಾಮಗಾರಿಗೆ ದೇವರ ಭಕ್ತನಾದಂತಹ ಕಲ್ಬುರ್ಗಿಯ ಸಕ್ಕರೆ ಕರೆಡೆಪ್ಪ ಎಂಬುವರು ಈ ದೇವಸ್ಥಾನವನ್ನು ಕಟ್ಟಿಸಿದ್ದಾರೆಂದು ತಿಳಿದುಬರುತ್ತದೆ. ಇತ್ತೀಚೆಗೆ ಅದಕ್ಕೆ ಸುಣ್ಣ, ಬಣ್ಣ ಇತ್ಯಾದಿಗಳಿಗೆ ಜಾತ್ರೆಯ ಪಟ್ಟಿಯೆಂದು ಭಕ್ತರಿಂದ ಹಾಗೂ ಊರಿನಲ್ಲಿರುವ ಮನೆಗೆಳಿಂದ ಪಟ್ಟಿ ಹಾಕಿ ಹಣ ಸಂಗ್ರಹ ಮಾಡಿ ಜಾತ್ರೆಯನ್ನು ವಿಜ್ರಂಭಣೆುಂದ ಮಾಡುತ್ತಾರೆ. ಜಾತ್ರೆಯು ಪ್ರಾರಂಭವಾಗುವುದಕ್ಕಿಂತ ಒಂದು ವಾರ ಮೊದಲು ದೇವಸ್ಥಾನಕ್ಕೆ ಸುಣ್ಣ ಬಣ್ಣಗಳನ್ನು ಹಚ್ಚುವುದರೊಂದಿಗೆ ಶೃಂಗಾರ ಮಾಡುತ್ತಾರೆ. ಈ ಕಾರ್ಯವನ್ನು ಗ್ರಾಮದ ಎಲ್ಲಾ ಜಾತಿಯ ಜನಾಂಗದವರು ಸೇರಿ ಯಾವುದೇ ಜಾತಿ ವೈಷಮ್ಯಗಳಿಲ್ಲದೆ ಪ್ರೀತಿುಂದ ಭಕ್ತಿಪೂರ್ವಕವಾಗಿ ದೇವಸ್ಥಾನವನ್ನು ಕಂಗೊಲಿಸುವಂತೆ ಮಾಡುತ್ತಾರೆ. ದೇವಸ್ಥಾನದ ಒಳಬಾಗ ಬಣ್ಣ ಬಣ್ಣಗಳಿಂದ ಹಾಗೂ ಹೊರಗಿನ ಗೋಡೆಯು ಸುಣ್ಣದಿಂದ ಅಲಂಕಾರಗೊಳಿಸುತ್ತಾರೆ.

## ೩. ಆರ್ಥಿಕ ಸ್ಥಿತಿಗತಿ

ಒಂದು ಜಾತ್ರೆ ಯಾವ ರೀತಿಯಾಗಿ ನೆಡೆಯುತ್ತದೆಯೋ ಹಾಗೂ ಆ ದೇವಸ್ಥಾನ ಹೊಂದಿದ ಆಸ್ತಿಯ ಆಧಾರದ ಮೇಲೆ ಆರ್ಥಿಕ ಸ್ಥಿತಿಯನ್ನು ನಾವು ಕಾಣಬಹುದಾಗಿದೆ. ಒಂದು ದೇವಸ್ಥಾನವು ಬಹಳಷ್ಟು ಆಸ್ತಿಯನ್ನು ಹೊಂದಿದ್ದು, ದೇವಾಲಯವು ದೊಡ್ಡದಾಗಿದ್ದು, ಭಕ್ತರು ಭಾರಿ ಪ್ರಮಾಣದಲ್ಲಿ ಬರುತ್ತಿದ್ದರೆ, ಆ ದೇವರ ಆರ್ಥಿಕ ಸ್ಥಿತಿ ಚೆನ್ನಾಗಿದೆ. ಎಂದು ತಿಳಿಯುತ್ತೇವೆ. ಆದರೆ ಭೈರಾಪುರದ ಮರಿಸ್ವಾಮಿ ದೇವರಿಗೆ ಆಸ್ತಿ ಪಾಸ್ತಿಗಳು ಇಲ್ಲವಾದ್ದರಿಂದ ಹಾಗೂ ಸಾಮಾನ್ಯವಾಗಿ ಭಕ್ತರು ಬಂದು ಹೋಗುವುದರಿಂದ ಆರ್ಥಿಕವಾಗಿ ಅಷ್ಟೊಂದು ಅಭಿವೃದ್ಧಿ ಹೊಂದಿಲ್ಲವಾದರೂ ಆ ಗ್ರಾಮದ ಹಾಗೂ ಸುತ್ತಮುತ್ತಲಿನ ಗ್ರಾಮದ ಭಕ್ತರು ದೇವಸ್ಥಾನಕ್ಕೆ ನೀಡುವ ಹರಕೆಗಳನ್ನು ತೀರಿಸಲು ಧವಸ ಧಾನ್ಯಗಳು ಹಾಗೂ ಬಂಗಾರ, ಬೆಳ್ಳಿ, ಹಣ ಕ್ರೋಢೀಕರಿಸಿಕೊಂಡು ಈ ದೇವಸ್ಥಾನದ ಕಾರ್ಯಕ್ರಮಗಳನ್ನು ಮಾಡುತ್ತಾರೆ. ಭಕ್ತರಿಂದ ಬರುವ ಕಾಣಿಕೆಗಳೇ ಈ ದೇವರ ಆದಾಯ ಎನ್ನಬಹುದು.

ರಾಜಕೀಯವಾಗಿ ಈ ದೇವಸ್ಥಾನಕ್ಕೆ ಸ್ವಲ್ಪ ಆದಾಯವಿರುವುದನ್ನು ಕಾಣಬುದಾಗಿದೆ. ಚುನಾವಣೆಯ ಸಂದರ್ಭದಲ್ಲಿ ವಿವಧ ಪಕ್ಷದ ಮುಖಂಡರು ದೇವರಿಗೆ ನೀಡುವ ಹಣವನ್ನು ಯಾವುದೇ ಒಂದು ಅಭಿವೃದ್ಧಿಕಾರ್ಯಕ್ಕೆಂದು ಉಪಯೊಗಿಸಿಕೊಳ್ಳುತ್ತಾರೆ. ಹಾಗೂ ಅವರ ಪಕ್ಷ ಅಧಿಕಾರಕ್ಕೆ ಬಂದರೆ ರಸ್ತೆ ದುರಸ್ತಿ ಮಾಡಿಸುವುದು, ವಿದ್ಯುತ್ ಸೌಕರ್ಯ ಮಾಡಿಕೊಡುವುದು, ದೇವಸ್ಥಾನದ ಆವರಣ ನಿರ್ಮಿಸುವುದು, ಈ ರೀತಿಯಾಗಿ ಹಲವಾರು ಕೆಲಸಗಳು ರಾಜಕೀಯ ಮುಖಂಡರಿಂದ ನೆಡೆಯುತ್ತವೆ. ಎಂದು ಹೇಳಬಹುದು. ಭಕ್ತರಿಂದಲೂ ದೇವಸ್ಥಾನಕ್ಕೆ ಆದಾಯವಿದೆ. ಆ ಊರಿನ ಹಾಗೂ ಸುತ್ತಮುತ್ತಲಿನ ಗ್ರಾಮಗಳ ಭಕ್ತರು ಹಾಗೂ ಗುಲ್ಬರ್ಗಾದಿಂದ ವರ್ಷಕ್ಕೊಮ್ಮೆ ನಲವತ್ತು ಲೀಟರ್ ತೈಲವನ್ನು ದೇವಸ್ಥಾನದ ದೀಪಕ್ಕೆಂದು

ಕೊಡಿಸುತ್ತಾರೆ. ಬೆಂಗಳೂರ, ಹಾಗೂ ಬಳ್ಳಾರಿಯಿಂದ ಬರುವ ಭಕ್ತರು ಕೊಡುವ ಕಾಣಿಕೆಗಳೆಲ್ಲವು ಈ ದೇವಸ್ಥಾನದ ಆದಾಯಗಳಾಗಿವೆ ಎಂದು ಹೇಳಬಹುದು ಹಾಗೂ ಈ ದೇವರ ಜಾತ್ರೆಯ ಸಂದರ್ಭದಲ್ಲಿ ವಿವಿಧ ಊರುಗಳಿಂದ ವ್ಯಾಪಾರಕ್ಕೆಂದು ಬರುವ ಕಿರಾಣಿ, ಹೋಟೆಲ್, ಹಾಗೂ ನಾಟಕಕಂಪನಿ, ತೆಂಗಿನಕಾಯಿ ವ್ಯಪಾರಸ್ಥರು, ಜೋಗೇರ ಸಾಮಾನುಗಳನ್ನು ಮಾರುವವರಿಗೂ, ತೊಟ್ಟಿಲು ಜೀಕು, ಹೀಗೆ ಜಾತ್ರೆಗೆ ವ್ಯಾಪಾರಕ್ಕೆಂದು ಬಂದ ಎಲ್ಲಾ ವರ್ತಕರಿಂದ ನಿಗದಿಪಡಿಸಿದ ಹಣವನ್ನು ವಸೂಲು ಮಾಡಿ ರಸೀದಿ ನೀಡುವುದು ಹೀಗೆ ಹಲವಾರು ರೀತಿಂದ ಹಣ ಸಂಗ್ರಹಣೆ ಮಾಡುತ್ತಾರೆ.

ಸಾಮಾನ್ಯವಾಗಿ ಯಾವುದೇ ದೇವಸ್ಥಾನಕ್ಕೆ ಆದಾಯಕ್ಕಿಂತ ಖರ್ಚು ಹೆಚ್ಚು ಇರುತ್ತದೆ. ಎಂದು ಹೇಳಬಹುದು. ಏಕೆಂದರೆ ದೇವಸ್ಥಾನವು ಹೆಸರು ಪಡೆಯಬೇಕಾದರೆ ಆ ದೇವಸ್ಥಾನಕ್ಕೆ ಬರುವಂಥ ಭಕ್ತರಿಗೆ ಅನುಕೂಲಗಳಿರಬೇಕು. ಅಂದಾಗ ಭಕ್ತರು ಸಾಕಷ್ಟು ಸಂಖ್ಯೆಯಲ್ಲಿ ಬರುತ್ತಾರೆ. ಇದರಿಂದ ಜಾತ್ರೆಯು ವಿಜ್ರಂಭಣೆಂದ ನಡೆಯುತ್ತದೆ. ಅರ್ಚಕರಿಗೆ ಭಕ್ತರು ಧೂಪದತಟ್ಟೆಯಲ್ಲಿ ಹಾಕಿದ ಕಾಣಿಕೆಯನ್ನು ಸ್ವೀಕರಿಸಿ ಅದರಿಂದ ತಮ್ಮ ಕುಟುಂಭದ ವೆಚ್ಚವನ್ನು ನಿರ್ವಹಿಸುತ್ತಾರೆ. ಮತ್ತು ಭಕ್ತರು ವರ್ಷಕ್ಕೊಮ್ಮೆ ತಾವು ಹೊಲದಲ್ಲಿ ಬೆಳೆದ ಕಾಳುಕಡಿಗಳನ್ನು ಅರ್ಚಕರಿಗೆ ನೀಡುತ್ತಾರೆ.

ಜಾತ್ರೆಯ ಸಂದರ್ಭದಲ್ಲಿ ದೇವಸ್ಥಾನಕ್ಕೆ ಬಣ್ಣ ಅಲಂಕಾರಿಕ ವಸ್ತುಗಳಿಗೂ, ಧ್ವನಿವರ್ಧಕ ಮಾಧ್ಯಮಗಳಿಗೂ ಸಂಗೀತ ಕಾರ್ಯಕ್ರಮಗಳಿಗೂ ರಥ ರಿಪೇರಿಗಾಗಿ ಹೀಗೆ ಹಲವಾರು ಬಗೆಯ ಖರ್ಚುಗಳು ಬರುವುದುಂಟು. ಅದೇರೀತಿಯಾಗಿ ಅನ್ನದಾಸೋಹ ನಡೆಯುತ್ತಿರುತ್ತದೆ. ಈ ಎಲ್ಲಾ ಕಾರ್ಯಗಳಿಗೂ ಭಕ್ತರು ನೀಡುವ ಕಾಣಿಕೆಗಳಿಂದಲೇ ನಡೆಯುತ್ತವೆ. ಎಂದು ಹೇಳಬಹುದು. ಈ ವರ್ಷದ ಅವಧಿಯಲ್ಲಿ ಜಾತ್ರೆಯ ಮಹೋತ್ಸವಕ್ಕೆ ಹೊಸ ತೇರನ್ನು ಕಟ್ಟಿಸಲು ತಗಲಿದ ವೆಚ್ಚಸುಮಾರು ಒಂದು ಲಕ್ಷದ ಇಪ್ಪತ್ತು ಸಾವಿರ ರೂಪಾಯಿಗಳು ಇದು ಮರದಿಂದ ಮಾಡಿದ ರಥವಲ್ಲ. ಕಬ್ಬಿಣದಿಂದ ಮಾಡಿದಂತ ರಥವಾಗಿದೆ. ಇಂತಹ ವೆಚ್ಚಗಳಿಗೆ ಭಕ್ತರಿಂದ ಸಂಗ್ರಹಿಸಿದ ಕಾಣಿಕೆಯ ಹಣವನ್ನೇ ವೆಚ್ಚಮಾಡಲಾಗುತ್ತದೆ. ಚೀಟಿ ಹಾಕುವುದರಿಂದ ಬರುವ ಆದಾಯವನ್ನು ಇಲ್ಲಿ ಪೂಜೆ ಮಾಡುವಂತಹ ಸಂದರ್ಭದಲ್ಲಿ, ಯಜ್ಞಯಾಗಾದಿಗಳನ್ನು ಮಾಡುವುದರಿಂದ ಕಾಣಿಕೆಯನ್ನು ಸಂಗ್ರಹಿಸಿ ಜನಪದ ಗೊಂಬೆಗಳಿಗೂ ಸಹ ಡೋಲು ಇತ್ಯಾದಿ ಮಾದ್ಯಮಗಳಿಗೆ ಹಣವನ್ನು ತೆತ್ತು ತರುವಂತದ್ದು ಈ ರೀತಿಯಾಗಿ ಈ ದೇವರ ಭೌತಿಕ ಸ್ಥಿತಿಗತಿಗಳನ್ನು ನೋಡಬಹುದು.

## ಅಧ್ಯಾಯ ೪

## ಮೌಖಿಕ ಜಾನಪದ

೧. ಪುರಾಣ

೨. ಹಾಡು

೩. ಗಾದೆ

೪. ಒಗಟುಗಳು

೫. ನಂಬಿಕೆಗಳು

೬. ಸಂಬಂಧಗಳು

  ೧. ಮಾನವ, ಪ್ರಾಣಿ, ಪಕ್ಷಿ, ಸಸ್ಯವರ್ಗಗಳೊಂದಿಗಿನ ಸಂಬಂಧ

  ೨. ಇತರೆ ದೈವಗಳೊಂದಿಗೆ ಸಂಬಂಧ

# ಅಧ್ಯಾಯ ೪
## ಮೌಖಿಕ ಜಾನಪದ

ಜಾನಪದ ಸಾಹಿತ್ಯ ಜನತೆಯ ಬದುಕಿನಲ್ಲಿ ಸಹಜವಾಗಿ ಉದಯಿಸಿದ ಸಾಹಿತ್ಯ. ಉದ್ದೇಸಪೂರ್ವಕವಾಗಿ ಸೃಷ್ಟಿಯಾದುದಲ್ಲ. ಅಂದಂದಿನ ದುಂದುಗಕ್ಕೆ ಮೈಸೋಮ ಮನಸೋತು ತಾನೇ ತಾನಾಗಿ ಸೃಷ್ಟಿಯಾದದ್ದು ಬದುಕಿನೊಡನೆ ಬೆಸೆದುಕೊಂಡು ಬಂದದ್ದು ಪರಂಪರಾನುಗತವಾಗಿ ಬಾಯಿಯಿಂದ ಬಾಯಿಗೆ ಕಿವಿಯಿಂದ ಕಿವಿಗೆ ಹರಿದು ಬಂದ ಶಾಬ್ದಿಕ ಅಭಿವ್ಯಕ್ತಿ, ಸರಳ, ಸುಂದರ, ಸೃಷ್ಟಿ ಅಜ್ಞಾ ಕರ್ತವ್ಯ ವ್ಯಷ್ಟಿ ಸೃಷ್ಟಿಯಾದರೂ ಸಮಸ್ಯೆಯ ಸ್ವತ್ತಾಗಿ ಸಾಮಾಜಿಕ ಮನರ್ ಸೃಷ್ಟಿಗೊಳಗಾದದ್ದು. ವ್ಯಾಪಕತ್ವ ಇದರ ಲಕ್ಷಣವಾಗಿದ್ದು ನಿರಂತರವಾಗಿ ಉಳಿದು ಬಂದ ವಾಕ್ ಸಂಪ್ರದಾಯವಾಗಿ ಪರಿಣಮಿಸಿದೆ.

ಶಿಷ್ಟಸಾಹಿತ್ಯ ಜನಪದ ಸಾಹಿತ್ಯಕ್ಕಿಂತ ಭಿನ್ನವಾದದ್ದು ಉದ್ದೇಸಪೂರ್ವಕವಾದದ್ದು. ವ್ಯಕ್ತಿಯೊಬ್ಬನಿಂದ ರಚಿತವಾಗಿ ಬರವಣಿಗೆಯ ಮೂಲಕ ಉಳಿದು ಬರುವಂತಹ ಕಾಲದ ಯಾವುದೇ ವ್ಯತ್ಯಾಸಕ್ಕೆ ಗುರಿಯಾಗುವುದಿಲ್ಲ. ಇಲ್ಲಿ ಕರ್ತೃತ್ವದ ಅಧಿಕಾರವಿದೆ. ಶಿಷ್ಟಸಾಹಿತ್ಯದಲ್ಲಿ ವ್ಯಷ್ಟಿ ಅನಿಸಿಕೆಗಳಿಗೆ ಹೆಚ್ಚು ಪ್ರಧಾನ್ಯತೆ ಜನಪದ ಮತ್ತು ಶಿಷ್ಟಸಾಹಿತ್ಯಕ್ಕೆ ವ್ಯತ್ಯಾಸವಿರುವಂತೆ ಸಂಬಂಧವು ಇದೆ. ಶಿಷ್ಟಸಾಹಿತ್ಯಕ್ಕೆ ಜನಪದಸಾಹಿತ್ಯವೆ ಮೂಲ ಪ್ರೇರಕ ಶಕ್ತಿ. ಇವೆರಡು ಅಕ್ಕಪಕ್ಕದಲ್ಲಿ ಹರಿಯುವ ನದಿಗಳಿದ್ದಂತೆ. ಪ್ರವಾಹ ಬಂದಾಗ ಒಂದರ

ನೀರು ಮತ್ತೊಂದಕ್ಕೆ ಬೆರೆಯುವಣತೆ ಎರಡೂ ಪರಸ್ಪರ ಬೆರೆತಿವೆ. ಈ ರೀತಿ ಜನಪದರ ಕಲೆಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

## ೧. ಪುರಾಣ

ಗ್ರಾಮದೇವರುಗಳನ್ನು ಅರ್ಥೈಸಲು ಗ್ರಾಮ ಜೀವನದಲ್ಲಿ ಹಾಸುಹೊಕ್ಕಾಗಿರುವ ಪುರಾಣ ಕಥೆಗಳೇ ಆಧಾರ. ಈ ದೇವರುಗಳಿಗೆ ಸಂಬಂಧಿಸಿದ ವಿವರಗಳು ಶಿಲಾಶಾಸನಗಳಲ್ಲಾಗಲಿ, ಸಾಹಿತ್ಯ ಕೃತಿಗಳಲ್ಲಾಗಲಿ ಉಲ್ಲೇಖಗೊಂಡಿರುವುದು ವಿರಳವೆಂದೇ ಹೇಳಬೇಕು. ಆದ್ದರಿಂದ ಪುರಾಣ, ಐತಿಹ್ಯದಂಥ ಕಥೆಗಳನ್ನೇ ನಾವು ಅವಲಂಭಿಸಬೇಕಾಗಿದೆ. ಜನಪದ ಪುರಾಣ ಪ್ರಪಂಚದಲ್ಲಿ ಗ್ರಾಮದೇವರುಗಳ ವ್ಯಕ್ತಿತ್ವವನ್ನೆಲ್ಲಾ ಮುಖಗಳಲ್ಲಿ ಪ್ರಕಟಗೊಂಡಿದೆ. "ಪುರಾಣಗಳು, ನಂಬಿಕೆಯ ಫಲ, ನಂಬಿಕೆಗಳು ಅನುಭವದ ಪರಿಣಾಮ" ಎಂಬ ಹೇಳಿಕೆಯನ್ನು ಗಮನಿಸಿದರೆ ಗ್ರಾಮದೇವತೆಗಳ ಮೂಲಕ ಜನಪದರು ಲೋಕವನ್ನು ಎದುರಿಸುವ ಪ್ರಯತ್ನ ಮಾಡಿರುವುದಕ್ಕೆ ಪುರಾವೆಗಳು ಸಿಗುತ್ತವೆ. ಪ್ರಚಲಿತವಾಗಿದ್ದ ಸಾಮಾಜಿಕ ಸಂಸ್ಥೆಗಳನ್ನು ಉಳಿಸಿಕೊಳ್ಳಲು ಪ್ರಾಚೀನ ಆಚರಣೆಗಳನ್ನು ಗಟ್ಟಿಗೊಳಿಸಲು ಈ ಪುರಾಣಗಳು ಸಾಧನಗಳಾಗಿ ಕಾರ್ಯನಿರ್ವಹಿಸಿವೆ. "ಪುರಾಣಗಳು ಹಿಂದೆ ನಡೆದವು ಎನ್ನಲಾದ ದೇವಾನುದೇವತೆಗಳ ಚಟುವಟಿಕೆಗಳನ್ನು ವಿವರಿಸುತ್ತದೆ" ಎನ್ನುವ ಮಾತು ಉತ್ಪ್ರೇಕ್ಷೆಯಲ್ಲ. ಆದ್ದರಿಂದ ಜನಸಮುದಾಯದ ಚರಿತ್ರೆಯನ್ನು ಹುಡುಕಲು ಪುರಾಣ ಕಥೆಗಳು ಶಕ್ತ ಸಾಧನಗಳಾಗಿವೆ. ಜನಪದ ಪುರಾಣಗಳು ಕಟ್ಟು ಕಥೆಯಲ್ಲ. ಅವು ಬಹುಸಂಖ್ಯಾತ ಜನತೆಯ ಬದುಕಿಗೆ ಹಿಡಿದ ಕನ್ನಡಿ "ಪುರಾಣ ನಾಗರಿಕ ಜನರಲ್ಲಿ ಕೇವಲ ಹೇಳಿದ ಕಥೆಯಲ್ಲ. ಅತ್ಯಂತ ಕ್ರೀಯಾಶೀಲವಾದ ಸಾಂಸ್ಕೃತಿಕ ಶಕ್ತಿ" ಎಂಬ ಮ್ಯಾಲಿನೋವಸ್ಕಿಯ ಮಾತನ್ನು ಜನಪದ ಪುರಾಣಗಳಿಗೆ ಖಚಿತವಾದ ಅನ್ವಯ ಮಾಡಬಹುದು.

ಪದ್ಧತಿಗಳು ಪ್ರಮುಖ ಸಿದ್ಧಾಂತಗಳು ಧರ್ಮಗಳು ಆ ಬಗೆಯ ಮೂಲ ಪರಿಕಲ್ಪನೆಯ ಹುಟ್ಟಿನ ಸಂಗತಿಗಳನ್ನು ಹೇಳುವ ಕಥೆಯೇ ಪುರಾಣ. ಆದಿ ಮಾನವ ನಿಸರ್ಗ ನಿಯಮವನ್ನು ವಿವರಿಸಲು ಮಾಡಿದ ಪ್ರಯತ್ನವೇ ಪುರಾಣ. ಪುರಾಣ ಕಥೆಗಳಲ್ಲಿ ಮನುಷ್ಯನ ಸಾಮರ್ಥ್ಯವನ್ನು ಮೀರಿದ ಚಟುವಟಿಕೆಗಳನ್ನು ಕಾಣುತ್ತೇವೆ. ಐತಿಹ್ಯ ನಿರ್ದಿಷ್ಟ ಸ್ಥಳವೊಂದಕ್ಕೆ ಗಂಟು ಹಾಕಿಕೊಂಡಿರುತ್ತದೆ. ಅದು ಸ್ಥಳದ ಹೆಸರಿನ ಉಗಮದ ಕಥೆ ಹೇಳುತ್ತದೆ. ಶಿಷ್ಟಸಂಸ್ಕೃತಿಯ ಮತ್ತು ಜನಪದ ಸಂಸಕೃತಿಯ ಪುರಾಣಗಳ ನಡುವೆ ಇರುವಂತಹ ಅಂತರವನ್ನು ಗಮನಿಸುವುದು. ಅಗತ್ಯವಾಗಿದೆ. ಶಿಷ್ಟಸಂಸ್ಕೃತಿಯ ಪುರಾಣಗಳು ಧಾರ್ಮಿಕವಾದ ಆಲೋಚನ ಮತ್ತು ಅಭಿವ್ಯಕ್ತಿಯನ್ನು ಹೊಂದಿರುತ್ತದೆ. ಪರಲೋಕದ ಪರಿಕಲ್ಪನೆ ಅಲ್ಲಿ ಯಥೇಚ್ಛವಾಗಿ ಬರುತ್ತದೆ. ಆದ್ದರಿಂದ ಬಹಳ ಸಲ ಶಿಷ್ಟ ಮನಸ್ಸಿನ ಪುರಾಣಗಳು ಪ್ರಬುದ್ಧ ಮನಸ್ಸಿನ ಸೃ ಎನ್ನಬಹುದು. ಜನಪದ ಸಂಸ್ಕೃತಿಯ ಪುರಾಣಗಳು ಸ್ಥಳೀಯ ಗುಣವನ್ನು, ಮಾಹಿತಿಯನ್ನು ಹೊಂದಿರುತ್ತದೆ. ನಿತ್ಯ ಬದುಕಿನ ವಿವರಗಳನ್ನು ಜನಪದ ಪುರಾಣಗಳು ಬಹುಪಾಲು ಹೊಂದಿರುವುದನ್ನು ಕಾಣಬಹುದು. ಆದ್ದರಿಂದ ಈ ಜನಪದ ಸಂಸ್ಕೃತಿ ಲೌಕಿಕವಾದದ್ದು ಎಂದು ಹೇಳಬಹುದು. ಹರಿಯುವ ನೀರು ಉರಿಯುವ ಸೂರ್ಯ, ಗಿಡ, ಮರ, ಕಲ್ಲುಗಳಲ್ಲಿ ಚೈತನ್ಯವನ್ನು ಕಂಡ ಮನುಷ್ಯ ಅವುಗಳನ್ನು ಆರಾದಿಸತೊಡಗಿದ. ಆದ್ದರಿಂದ

ಗ್ರಾಮದೇವತೆಗಳ ದೇವಸ್ಥಾನಗಳಲ್ಲಿ ಬಹುಪಾಲು ಶಿಲೆಗಳು, ಹುತ್ತುಗಳು, ವೃಕ್ಷಗಳಾಗಿವೆ. ಶಿಲೆ, ಹುತ್ತ, ವೃಕ್ಷಗಳನ್ನು ಆರಾದಿಸುತ್ತಾ ಬಂದ ಮನುಷ್ಯ ನಂತರ ಅವುಗಳಿಗೆ ಪುರಾಣ ಕತೆಗಳನ್ನು ಕಟ್ಟಿರುವ ಸಾದ್ಯತೆ ಇದೆ. ಆದ್ದರಿಂದ ದೇವರುಗಳ ಸುತ್ತಪುರಾಣ ಕತೆಗಳ ಜಾಲವನ್ನು ಹರಡಿದ್ದು ನಮ್ಮ ಪೂರ್ವಿಕರ ಆಲೋಚನಾ ಶಕ್ತಿಯಲ್ಲಾದ ಪ್ರಗತಿಯ ಸೂಚಕವೆಂದು ಹೇಳಬಹುದು. ಹೀಗೆ ಉಗಮಗೊಂಡ ಪುರಾಣಗಳು ಸಾಮಾಜಿಕ ಪುರಾಣಗಳಾಗಿ ಪರಿವರ್ತನೆ ಹೊಂದಿ ಸಾಮಾಜಿಕ ನೀತಿನಿಯಮಗಳನ್ನು ಕಾಪಾಡಿಕೊಳ್ಳುವ ಸಾಧನಗಳಾದವು. ಆದ್ದರಿಂದ ದೈವದ ಕಲ್ಪನೆಯ ಬೆಳವಣಿಗೆಗೆ ಪೀಠಿಕೆಯಂತೆ ಒಂದು ವಸ್ತು ಮೊದಲು ಸ್ಥಾಪನೆಯಾಗಬೇಕು ನಂತರ ಆ ದೇವತೆಗೆ ಒಂದು ಪುರಾಣ ಪರಂಪರೆ ದಕ್ಕುತ್ತದೆ. ಅದರ ಗುಣ ಸ್ವಭಾವಗಳನ್ನು ಚಿತ್ರಿಸುವ ವರ್ಣಮಯ ಪುರಾಣಾವಳಿ ಏರ್ಪಡುತ್ತದೆ.

ಗ್ರಾಮದೇವರು ನಿರ್ದಿಷ್ಟ ಗ್ರಾಮಗಳಲ್ಲಿ ನೆಲೆಗೊಳ್ಳುವ ವಿಧಾನ ಕುತೂಹಲ ಕಾರಿಯಾದುದಾಗಿದೆ. ಇದರ ಪೂರ್ವದ ಸ್ಥಿತಿ ಜನತೆಯ ಸಂಕಷ್ಟದ ಕಾಲ ಎನ್ನಬಹುದು. ಅಥವಾ ಅವರು ದೇವರನ್ನು ಉಪೇಕ್ಷೆ ಮಾಡಿದ ಸಂದರ್ಭ ಇರಬಹುದು. ಇಲ್ಲವೇ ಬದುಕಲು ದೈವದ ಅಗತ್ಯವನ್ನು ಮನಗಾಣದ ಮಾನಸಿಕ ಹಂತ ಎನ್ನಬಹುದು. ಇಂಥ ಸಂದರ್ಭದಲ್ಲಿ ಯಾವುದೇ ಒಂದು ಗ್ರಾಮಕ್ಕೆ ದೇವತೆಯ ಪ್ರದೇಶವಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಭಕ್ತರನ್ನು ದೇವತೆಯೇ ಸಂಪರ್ಕಿಸುವುದು. ಇಲ್ಲಿನ ಸಾಮಾನ್ಯ ಅಂಶ ದೇವರು ಭಕ್ತರಿಗೆ ನೆರವಾಗುವ ಬಯಕೆಯನ್ನು ವ್ಯಕ್ತಪಡಿಸುತ್ತದೆ. ಆ ಕಾರಣಕ್ಕಾಗಿ ತನ್ನ ಆರಾಧನೆಯನ್ನು ಮಾಡಬೇಕೆಂದು ಕೇಳಿಕೊಳ್ಳುತ್ತದೆ. ಭಕ್ತರು ಇದಕ್ಕೆ ಒಡಂಬಟ್ಟು ದೇವತೆಯನ್ನು ತಮ್ಮ ಗ್ರಾಮದಲ್ಲಿ ಪ್ರತಿಷ್ಠಾಪನೆ ಮಾಡುತ್ತಾರೆ. ದೇವರು ಭಕ್ತರನ್ನು ಕನಸಿನಲ್ಲಿ ಕಂಡು ಮಾತನಾಡುವುದು ಇಲ್ಲವೇ ಆಶ್ಚರ್ಯಕರವಾದ ಸಂದರ್ಭವನ್ನು ಈ ಉದ್ದೇಶಕ್ಕಾಗಿಯೇ ಸೃಸಿ ತಿಳುವಳಿಕೆಯನ್ನು ಕೊಡಬಹುದು. ಈ ಸಂದರ್ಭದಲ್ಲಿ ಈ ಪುರಾಣಕತೆಯನ್ನು ಅವಲೋಕಿಸಬಹುದು.

ಬಳ್ಳಾರಿಯ ಶ್ರೀಮರಿಸ್ವಾಮಿಗಳು ೧೯ನೇ ಶತಮಾನದಲ್ಲಿ ಲಿಂಗೈಕ್ಯರಾದ ಶ್ರೀ ಶಿವಯೋಗಿ ಪುಂಗರವರು ಇವರ ಮಠದಲ್ಲಿರುವ ಕಾಗದ ಪತ್ರಗಳಿಂದ ಸಿದ್ಧಪಡಿಸಲಾಗಿರುವ ಸ್ವಾಮಿಗಳ ಮತ್ತು ಇವರ ಪಟ್ಟದ ಶಿಷ್ಯರಾದ ಸಕ್ಕರಿಕರಡಪ್ಪನೆಂಬ ಶಿವಶರಣನ ಐತಿಹಾಸಿಕ ಚರಿತ್ರೆಯನ್ನು ಪುರಾಣ ರೂಪವಾಗಿ ಭಾಮಿನಿಷಟ್ಪದಿಯಲ್ಲಿ ಸರಳ ಭಾಷೆಯಲ್ಲಿ ವೈ. ನಾಗೇಶಶಾಸ್ತ್ರಗಳವರು ಬರೆದಿದ್ದಾರೆ. ಈ ಪುರಾಣದಲ್ಲಿ ಶಿವಯೋಗಿಗಳ ಕೆಲವು ಮಹಿಮೆಗಳ ಉಲ್ಲೇಖವೂ ಇದೆ. ಈ ಮಹಿಮೆಗಳು ಕಾಲ್ಪನಿಕ ಪವಾಡಗಳಾಗಿರದೇ ಯೋಗಶಾಸ್ತ್ರಸಿದ್ಧವಾದ ಮಹಿಮೆಗಳಿರುವವೆಂಬುದು ಶಿವಾನುಭವಗಳಿಗೆ ತಿಳಿದ ವಿಷಯವಾಗಿದೆ.

ಈ ಪುರಾಣವು ಹದಿನೆಂಟು ಸಂದಿಗಳನ್ನು ಒಳಗೊಂಡಿದ್ದು ಒಂದೊಂದು ಸಂದಿಯಲ್ಲಿ ಒಂದೊಂದು ವಿಚಾರವನ್ನು ಒಳಗೊಂಡಿದೆ. ಒಂದನೇ ಸಂದಿಯಲ್ಲಿ ತನ್ನ ನಾಡಿನ ಭಾಷೆ, ಧರ್ಮಗಳ ಪ್ರತಿಷ್ಠೆಯನ್ನು ಹೇಳುವಂತದ್ದಾಗಿದ್ದು ಮರಿಸ್ವಾಮಿಯು ಶ್ರೀ ಹರನ ಕರುಣೆುಂದ [೧] ಧೃತಶಿವ ಮತ್ತು ಗಂಗಮ್ಮ ಎಂಬ ದಂಪತಿಗಳಿಗೆ[೨] ಮುದ್ದು ಮಗನಾಗಿ ಶ್ರೀ ಬಸವಣ್ಣನ ಹೋಲಿಕೆಯಂತೆ ಕಂಗೊಳಿಸಿದಾಗ ಕಲಬುರ್ಗಿ ಎಂಬ

ಪಟ್ಟಣದಲ್ಲಿ ಜನಿಸಿದನು. ಶ್ರೀ ಪರಮೇಶ್ವರನ ಭಕ್ತಿಯ ಹಿನ್ನೆಲೆಯಲ್ಲಿ ಜನಿಸಿದ ಮರಿಯೋಗಿ ವೀರಶೈವ ಧರ್ಮವನ್ನು ಧರ್ಮದ ನಾಯಕನಾಗಿ ಉದುಸಿದನು. ಹಾಗೆ ಜನಿಸಿದಂತ ಮಗುವಿಗೆ ಮರಿಸ್ವಾಮಿ, ಮರಿಯೋಗಿ ಎಂಬ ಹೆಸರನ್ನು ನಾಮಕರಣ ಮಾಡಿದರು. ಪುಟ್ಟಮಗುವಿನಲ್ಲಿಯೇ ಒಳ್ಳೆಯ ಗುಣಗಳನ್ನು ಕಂಡಂತಹ ದಂಪತಿಗಳು ಬಹಳ ಸಂತೋಷದಿಂದ ಮಗುವನ್ನು ಸಾಕಿಸಲುಹಿದರು.

ಮಗುವಿಗೆ ಚಿಕ್ಕವಯಸ್ಸಿನಲ್ಲಿಯೇ ದೇವರ ಮೇಲಿನ ಭಕ್ತಿ ಅಪಾರವಾದಗ ಆಗಲೇ ದೇವರ ಗೃಹವನ್ನು ಸೇರಿದನು ಈ ರೀತಿ ಶಿವನು ತನ್ನ ಕರುಣೆುಂದ ಉದ್ಭವಿಸಿದ ಭಕ್ತನಾದ ಮರಿಸ್ವಾಮಿಯನ್ನು ಐದನೇ ವಯಸ್ಸಿನಲ್ಲಿ ಶಿವ ಅವನನ್ನು ತನ್ನ ತಂದೆ ತಾುಗಳಿಂದ ಅಗಲಿಸಿ ತನ್ನ ಸನ್ನಿದಿಗೆ ಬರಮಾಡಿಕೊಂಡನು. ಈ ರೀತಿ ಮಗ ಹೋದುದನ್ನು ಕಂಡ ದಂಪತಿಗಳು ಮಕ್ಕಳಿಲ್ಲದೇ ದಂಪತಿಗಳಿಗೆ ಮಕ್ಕಳನ್ನು ಕೊಟ್ಟು ಮತ್ತೆ ತಮ್ಮ ಮಗನನ್ನು ನಮ್ಮಿಂದ ಕಸಿದುಕೊಂಡನೆಂದು ಚಿಂತಾಕ್ರಾಂತರಾದರು. ಆದರೆ ಒಂದು ಕಡೆುಂದ ಇಂತಹ ಮಗನನ್ನು ಪಡೆದ ನಮ್ಮ ಜನ್ಮ ಸಾರ್ಥಕವಾುತೆಂದು ದಂಪತಿಗಳು ಗರ್ವಪಟ್ಟರು.

ಮರಿಸ್ವಾಮಿ ಮಹಾತ್ಮನಿಂದ ಸಿರಿ ಸಂಪತ್ತನ್ನು ಗಳಿಸಲು ದೂರ್ತನೊಬ್ಬನು ಪರಮಭಕ್ತಿಯ ನಟಿಸಿ ಅವನನ್ನು ಕಲಬುರ್ಗಿ ಪಟ್ಟಣವನ್ನು ಬಿಡಿಸಿದನು. ಅದೇ ಜನಾಂಗದ ಗುರುವು ಅವನಿಗೆ ದೀಕ್ಷೆಯನ್ನು ಕೊಡುತ್ತಾನೆ. ತಾನು ವಿದ್ಯಾಬ್ಯಾಸ ಮಾಡುವ ಶಾಲೆಯಲ್ಲಿ ನಾಲ್ಕಾರು ತಿಂಗಳಲ್ಲಿ ಕನ್ನಡವನ್ನು ಕಲಿತುಕೊಂಡನು. ಹೀಗೆ ವಿದ್ಯಬ್ಯಾಸ ಮುಂದುವರೆಸುವುದರ ಜೊತೆಗೆ ಪೂಜಾ ಕಾರ್ಯಕ್ರಮಗಳು ಸಹ ಬಹಳ ಭಕ್ತುಂದ ಮಾಡಿದನು. ಈ ರೀತಿಯ ಮರಿಸ್ವಾಮಿಯ ಭಕ್ತಿ, ಸಹನೆ, ಪವಾಡಗಳನ್ನು ಕಂಡು ಅವನ ಭಕ್ತನಾದನು. ಬಳ್ಳಾರಿಯ ಧೂರ್ತನೊಬ್ಬನು ಮರಿಸ್ವಾಮಿಯನ್ನು ತನ್ನ ಸ್ವಗ್ರಾಮವಾದ ಬೆಂಗಳೂರಿಗೆ ಕರೆದೊಯ್ದು ತನ್ನ ಸಿರಿಸಂಪತ್ತಿಗೆ ನೀನೆ ಕಾರಣೀಭೂತ ಆದ್ದರಿಂದ ನಿನ್ನನ್ನು ಪೂಜೆಗೈಯಲು ಕರೆದೊಯುವೆನೆಂದು ಬಹಳ ಭಕ್ತುಂದ ಬೇಡಿಕೊಂಡನು. ಮರಿಯೋಗಿಯನ್ನು ತನ್ನ ಸ್ವಗ್ರಾಮವಾದ ಬೆಂಗಳೂರು ಎಂಬ ಸಿರಿ ಪ್ರದೇಶಕ್ಕೆ ಈತನನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಬಹಳ ವಿಜೃಂಭಣೆುಂದ ಮೆರವಣಿಗೆಯ ಮೂಲಕ ಶಿವಲಿಂಗ ಪೂಜೆ ಮಾಡುತ್ತಾ ಕರೆದೊಯ್ಯುವನು. ಈ ರೀತಿಯ ಮರಿಯೋಗಿಯನ್ನು ಕಂಡ ಜನರು ಇವನಿಗೆ ಹಲವಾರು ಜನ ಭಕ್ತರಾಗಿ ಅವನನ್ನು ಪೂಜಿಸಲು ಮುಂದಾದರು. ಏಕೆಂದರೆ ಶಿವನ ತೇಜಸ್ಸಿನಿಂದ ಕಂಗೊಳಸುವಂತಹ ಈ ಮರಿಯೋಗಿಯನ್ನು ಪೂಜಿಸದೇ ಇರುವರೇ.

ಮರಿಯೋಗಿ ಬೆಂಗಳೂರಿನಲ್ಲಿ ತುರುಗಳನ್ನು ಬುರುಗಲಯ್ಯ ಎಂಬ ನಾಮಕರಣದಿಂದ ಕಾಯುತ್ತಿದ್ದನು. ಈ ಸಂದಿಯಲ್ಲಿ ಅನೇಕ ಪವಾಡಗಳ ಮೂಲಕ ತನ್ನ ಹಿರಿಮೆಯನ್ನು ಹೆಚ್ಚಿಸಿಕೊಳ್ಳುತ್ತಾನೆ. ಬೆಂಗಳೂರಿನ ಶೆಟ್ಟಿ ಎಂಬುವನು ತನ್ನ ತುರುಗಳನ್ನು ಚೆನ್ನಾಗಿ ಮೇಉಸು ಎಂಬ ಗರ್ವದಿಂದ ಮರಿಯೋಗಿಯನ್ನು ಬೆದರಿಸಿದ್ದರಿಂದ ಅವನಿಗೆ ಹೆಣ್ಣು ಮಗು ಜನಿಸುವಂತೆ ಮಾಡಿದನು.

ಮರಿಯೋಗಿಯ ಜೊತೆ ಇತರ ಮಕ್ಕಳು ಸಹ ಹಸುಗಳನ್ನು ಕಾಯುವಂತಹ ಸಂದರ್ಭದಲ್ಲಿ ಸಿಂಹ, ಹುಲಿ, ಕರಡಿ ಎಂಬ ಕ್ರೂರ ಪ್ರಣಿಗಳು ಅವರನ್ನು ಆಪತ್ತಿಗೊಳಪಡಿಸಿದವು. ಇಂತಹ ಸಂದರ್ಭದಲ್ಲಿ ಮರಿಯೋಗಿ ಅವರಿಗೆ ಶಿವನ ಮಂತ್ರವನ್ನು ಹೇಳಿ ಇದನ್ನು ನೀವು ಪಠಿಸಿ ಯಾವುದೇ ತೊಂದರೆ ಬರುವುದಿಲ್ಲವೆಂದು ಹೇಳಿದನು. ಇದರಿಂದ ಸಂತೃಪ್ತರಾದ ಮಕ್ಕಳು ಮರಿಯೋಗಿಯ ತದ್ಭಕ್ತರಾದರು. ಮರಿಯೋಗಿ ಒಂದು ಹಳ್ಳವನ್ನು ದಾಟಲು ದಾರಿಲ್ಲದಂತ ಸಂದರ್ಭದಲ್ಲಿ ಆ ಹಳ್ಳಕ್ಕೆ ಸೇತುವೆಯ ಪವಾಡ ಹರನ ಭಕ್ತಿಂದ ಮಾಡಿದನು. ಇದನ್ನು ಕಂಡ ಜನರು ದಿಗ್‌ಬ್ರಮೆಯಾದರು. ಆಗ ಬೆಂಗಳೂರನ್ನು ಬಿಟ್ಟು ದೊಡ್ಡಬಳ್ಳಾಪುರಕ್ಕೆ ಆಗಮಿಸಿದನು. ಇಲ್ಲಯೂ ಸಹ ಕೆಲವೊಂದು ಪವಾಡಗಳನ್ನು ಮಾಡಿದನು. ಬೆಂಗಳೂರು ಬಿಟ್ಟು ಬಂದಂತ ಸಂದರ್ಭದಲ್ಲಿ ದನಕಾಯುವ ಮಕ್ಕಳು ಮತ್ತು ಶೆಟ್ಟಿಯವರು ಅವನನ್ನು ಹುಡುಕಾಡಲು ಅರಣ್ಯ ಪ್ರವೇಶಿಸಿ ಹುಡುಕಿದರು. ಹಾಗೆಯೆ ನಿಜಗಲ್ಲ್ ಎಂಬ ಗ್ರಾಮಕ್ಕೆ ಬಂದು ಮರಿಯೋಗಿಯನ್ನು ಪರಿತಪಿಸಿದರು. ಅಲ್ಲಿ ಪುನಃ ಅನೇಕ ಪವಾಡಗಳ ಮುಖಾಂತರ ಬೆಂಗಳೂರಿಗೆ ಬಂದು ಗಂಗಾಧರನೆಂಬ ನಾಮಕರಣದಿಂದ ಜನಿಸಿದನು. ಇವನ ಭಕ್ತರೆಲ್ಲ ಕೂಡಿ ಗಂಗಾಧರೇಶ್ವರ ರಥೋತ್ಸವವನ್ನು ವಿಜೃಂಭಣೆಂದ ಮಾಡಿದರು. ಕುಂಬುಳಕ್ಕೆ ಪ್ರವೇಶಿಸಿ ಅಲ್ಲಿಯೂ ಸಹ ನೆಲೆಸಿದ ನಂತರ ಬೆಂಗಳೂರಿನ ಶೇಟ್ಟಿಯವರುರಥೋತ್ಸವ ನೋಡಲು ಬಂದಂತಹ ಇವನು ಮರಿಯೋಗಿಯನ್ನು ಕಂಡು ತಾನು ತಂದಿದ್ದ ಸಿರಿ ಸಂಪತ್ತನ್ನೆಲ್ಲಾ ವ್ಯಯಮಾಡಿದನು.

ನಂತರ ಮೈಸೂರು ಒಡೆಯರ ಭವಿಷ್ಯವನ್ನು ಹೇಳುವ ಸಲುವಾಗಿ ಮೈಸೂರಿಗೆ ಬಂದಿಳಿದನು. ಗುಪ್ತದಿಂದ ಇವರನ್ನು ವೀರಶೈವರ ಮಠದಲ್ಲಿ ಇರಿಸಿದರು. ಈ ಮರಿಯೋಗೀಶ್ವರ ಪುರಾಣದಲ್ಲಿ ಎಂಟನೇ ಸಂಧಿಂದ ಹನ್ನೊಂದನೆ ಸಂಧಿಯವರೆಗೆ ಮೈಸೂರಿನ ಪ್ರದೇಶದಲ್ಲಿ ಮೈಸೂರಿನ ಒಡೆಯರ ಬಗ್ಗೆ ಹೇಳುತ್ತದೆ. ಇಲ್ಲಯೂ ಸಹ ಅನೇಕ ಪವಾಡಗಳನ್ನು ಮಾಡಿದರು. ಅದೇ ರೀತಿಯಾಗಿ ಹನ್ನೆರಡನೆಯ ಸಂಧಿಂದ ಹದಿನೈದು ಸಂಧಿಯವರೆಗೆ ರಾಯಪುರ, ಬಳ್ಳಾರಿ ಪ್ರದೇಶದಲ್ಲಿ ತನ್ನ ಗೃಹಸ್ಥಾಶ್ರಮವನ್ನು ಪ್ರವೇಶಿಸಲು ನಾಗವೇಣಿ ಎಂಬ ಕನ್ನಿಕೆಯನ್ನು ವಿವಾಹವಾಗಿ ಅಲ್ಲಿಯೂ ಕೆಲವೊಂದು ಸತ್ಕಾರ್ಯಗಳನ್ನು ಮಾಡಿದನು.

ನಂತರ ಹದಿನಾರು ಸಂಧಿಂದ ಹದಿನೆಂಟನೆ ಸಂಧಿಯವರೆಗೆ ಬಳ್ಳಾರಿ ಮತ್ತು ಭೈರಾಪುರ ಗ್ರಾಮದಲ್ಲಿ ಅನೇಕ ಪವಾಡಗಳನ್ನು ಹಾಗೂ ಸತ್ಕಾರ್ಯಗಳನ್ನು ಮಾಡುವುದರ ಮೂಲಕ ಭಕ್ತರ ಮನದಲ್ಲಿದೇವರಾಗಿ ಬೆಳೆದನು. ಹೀಗೆ ಈ ಪುರಾಣದಲ್ಲಿ ಈ ಮೂರು ಪ್ರದೇಶ ಅಂದರೆ ಬಳ್ಳಾರಿ, ಬೆಂಗಳೂರು, ಭೈರಾಪುರ ಎಂಬ ಗ್ರಾಮಗಳಲ್ಲಿ ತನ್ನ ಸ್ಥಾನವನ್ನು ಬೆಳೆಸಿಕೊಂಡನು. ಏಕೆಂದರೆ ಈ ಪುರಾಣವು ಹದಿನೆಂಟು ಸಂಧಿಗಳನ್ನು ಹೊಂದಿದ್ದು ಒಂದೊಂದು ಸಂಧಿಯು ಒಂದೊಂದು ಹಂತವನ್ನು ತಿಳಿಸುತ್ತವೆ. ಇದರಲ್ಲಿ ಜನನ, ಪವಾಡ, ನಿರ್ವಾತದ ಬಗ್ಗೆ ಈ ಪುರಾಣವು ತಿಳಿಸುತ್ತದೆ.

೨ . ಹಾಡು

ಯಾವುದೇ ಜಾತ್ರೆಗಳು ನಡೆದರೂ ಆಯಾ ದೇವರುಗಳ ಮೇಲೆ ಹಾಡುಗಳನ್ನು ಹಾಡುತ್ತಾರೆ. ಜನಪದರು ಈ ನಮ್ಮ ಜನಪದರು ಅದರಲ್ಲಿ ಅವಿದ್ಯಾವಂತರು ಸರಾಗವಾಗಿ ಅರ್ಥಪೂರ್ಣವಾಗಿ ಜನಪದ ಶೈಲಿಯಲ್ಲಿ ಹಾಡುತ್ತಾರೆ. ಈ ಕಲೆಗಳನ್ನು ಒಂದು ಬರಹದ ಮೂಲಕವಾಗಿ ನೋಡುವುದರೊಂದಿಗೆ ಕಲಿತವರಲ್ಲ. ಅವರ ಅಂತರಾಳದಿಂದ ಬುಗಿದೆದ್ದ ಅನಿಸಿಕೆಗಳನ್ನು ಹಾಡಿನ ಮೂಲಕ ಮಾಲೆಯ ರೂಪದಲ್ಲಿ ಪೋಣಿಸುತ್ತಾರೆ. ಈ ಜನಪದರು ಒಂದು ರಾತ್ರಿ ಪೂರಾ ದೇವರುಗಳ ಮೇಲೆ ಹಾಡುಗಳನ್ನು ಹಾಡುವಂತಹ ಸಾಮರ್ಥ್ಯವನ್ನು ಜನಪದರು ಬೆಳೆಸಿಕೊಂಡಿದ್ದಾರೆ.

ಜನಪದರು ಹಾಡಿನ ಮೂಲಕವಾಗಿಯೇ ತಮ್ಮ ಸುಖ–ದು:ಖಗಳನ್ನು ಅತಿ ಹೆಚ್ಚಾಗಿ ಅಭಿವ್ಯಕ್ತಪಡಿಸುತ್ತಾರೆ. ತಮ್ಮ ಆಚರಣೆಗಳನ್ನು, ಸಂಪ್ರದಾಯಗಳನ್ನು ಸಹ ಹಾಡಿನ ಮೂಲಕ ತಿಳಿಯಪಡಿಸುತ್ತಾರೆ. ಅದೇ ರೀತಿಯಾಗಿ ಭೈರಾಪುರದ ಕ್ಷೇತ್ರದಲ್ಲಿ ಮರಿಸ್ವಾಮಿ ದೇವರ ಬಗ್ಗೆ ಅನೇಕ ಕಲಾವಿದರು (ಜನಪದರು) ಹಾಡುಗಳನ್ನು ಹಾಡುತ್ತರೆ. ಜಾತ್ರೆಯಲ್ಲಿ ಏನೆಲ್ಲಾ ಆಚರಣೆಗಳನ್ನು ಮಾಡುತ್ತಾರಯೋ ಅವುಗಳೆಲ್ಲವುಗಳ ಮೇಲೆ ಒಂದೊಂದು ಪದ (ಹಾಡುಗಳನ್ನು) ಗಟ್ಟಿ ಹಾಡುತ್ತಾರೆ.

ಮರಿಸ್ವಾಮಿ ದೇವರ ಜಾತ್ರೆಯ ತೇರಿನ ಬಗ್ಗೆ ಸಂಬಂದಪಟ್ಟಂತಹ ಒಂದು ಭಕ್ತಿ ಗೀತೆಯ ಸೊಗಡು.

೧. ಇದೇ ಮಹಾ ತೇರು

ಇದೇ ಹೊಸ ತೇರು

ಮರಿದೇವನ ದ್ಯಾನ ಈ ತೇರು ಆ, ಆ, ಆ, ॥ ಪ ॥

ಕಬ್ಬಿಣ ಉಕ್ಕು ತುಂಬಿದ ತೇರು

ಸಿಡಿಲಿಗೆ ಬೆಚ್ಚದ ಸ್ವಾಮಿಯ ತೇರು

ಸೊಂಡೂರು ಕಬ್ಬಿಣ ಕಲ್ಲೋಳು

ಹುಟ್ಟಿ ಬಂದ ಸ್ವಾಮಿಯ ತೇರು ಮರಿದೇವ ತಾತನ ಕೃಪೆಗೆ ಸಾಗಿ ಬಂದ ಈ ಮಹಾ ತೇರು ॥ ಪ ॥

ಬಣ್ಣ ಬಣ್ಣ ತುಂಬಿದ ತೇರು

ಪಂಚ ಕಳಸ ತುಂಬಿದ ತೇರು

ಮೂಲೆ ಮೂಲೆಗೆ ಗಂಟೆಯ ನಾದ

ಕೇಳಿ ಬರುವ ಹರನ ತೇರು

ಮರಿದೇವ ತಾತನ ಕೃಪೆಗೆ ಸಾಗಿ ಬಂದ ಈ ಮಹಾ ತೇರು ॥ ಪ ॥

ಜನಪದರು ಶ್ರೇಷ್ಠತೆಯನ್ನು ತಮ್ಮ ಹಾಡುಗಳಲ್ಲಿ ಬಹಳ ಅರ್ಥಪೂರ್ಣವಾಗಿ ಅಭಿವ್ಯಕ್ತಪಡಿಸುತ್ತಾರೆ. ಪಾಲಿಕೆಯನ್ನು ಯಾವ ರೀತಿಯಲ್ಲಿ ಕಟ್ಟುತ್ತಾರೆ ಮತ್ತು ಅದನ್ನು ಯಾವ ಸಮಯದಲ್ಲಿ ಎಲ್ಲಿಗೆ ತರುತ್ತಾರೆ

ಎಂಬುದನ್ನು ವಿಶಾಲವಾದ ಆಚರಣೆಗಳನ್ನು ತಮ್ಮ ಹಾಡುಗಳಲ್ಲಿ ಸಂಕ್ಷಿಪ್ತವಾಗಿ ಬಳಸಿಕೊಂಡು ಜನಪದರು ಹಾಡುಗಳನ್ನು ಹಾಡುತ್ತಾರೆ. ಅಂತಹ ಹಾಡುಗಳನ್ನು ಈ ಕೆಳಗಿನಂತೆ ನೋಡಬಹುದು.

೧.ಮರಿದೇವ ತಾತನ ಮಹಿಮೆಯನ್ನು
ಹೇಳುವೆ ಕೇಳು ತಮ್ಮ ನೀನು
ಇರುಳಲ್ಲಿ ತೇರು ಎಳೆದಾರ
ಪಾದ ಗಟ್ಟಿಗೆ ತಂದು ಬಿಟ್ಟಾರ
ಬಸವನ ಪೂಜೆ ಅಲ್ಲಿ ಮಾಡಿದರ ॥ ಪ ॥
ಇರುಳಲ್ಲಿ ಪಾಲಿಕೆ ಮಾಡ್ಯಾರ
ಸ್ವಾಮಿಯ ಗುಡಿ ಮುಂದೆ ನಿಲ್ಲಿಸ್ಯಾರ
ಶಿವ ಭಜನೆಯ ಪದವ ಹಾಡಿದರ ॥ ಪ ॥
ಮುಂಜಾನೆ ಪಾಲಿಕೆ ಹೂಡ್ಯಾರ
ಮೆರವಣಿಗೆ ಓಣಿಯಲ್ಲಿ ಮಾಡ್ಯಾರ
ಪಾದಗಟ್ಟಿಗೆ ಹೋಗುವ ಮುನ್ನ
ಭಕ್ತಾದಿಗಳು ಹಣ್ಣು ಕಾಯಿ ಹೊಡಿಸ್ಯಾರ. . . . . .

ಶ್ರೀ ಮರಿಸ್ವಾಮಿ ದೇವರ ಪಾದಕ್ಕೆ ಹೂವಿನ ಮಾಲೆ ಹಾಕುವುದರ ಮೂಲಕ ಹಾಡನ್ನು ಹಾಡಿರುವುದು (ಅಂತಹ ಸಂದರ್ಭದಲ್ಲಿ) ಜನಪದರು ಪ್ರತಿಯೊಂದು ಆಚರಣೆಯ ಸಂದರ್ಭದಲ್ಲಿ ಹಾಡನ್ನು ಹಾಡಿದ್ದಾರೆ.

೨.ಕರವ ಮುಗಿಯುವೆ ಶ್ರೀ ಮರಿದೇವಾ
ವರವ ನೀಡಿ ಹರಸಯ್ಯ ॥ ಪ ॥
ಕರುಣೆಯ ತೋರಿ
ಕಷ್ಟವ ನೀಗಿ
ಕನಿಕರ ನೀ ತೋರಯ್ಯ ಆ, ಆ, ಆ, ಆ, ॥ ಪ ॥
ಮಲ್ಲಿಗೆ ಹೂವಿನ ಮಾಲೆ
ಹಾಕುವೆ ಪಾದದ ಮೇಲೆ
ಸಂಪಿಗೆ ಹೂವಿನಮಾಲೆ
ಚೆಲ್ಲುವೆ ಪಾದದ ಮೇಲೆ
ಕರವ ಮುಗಿದು ಶಿರವ ಬಾಗಿ
ನಾನು ನಮಿಸುವೆನು ಆ, ಆ, ಆ, ಆ, ॥ ಪ ॥

ನಿನ್ನಯ ಭಕ್ತರು ಬಾಳಾ
ಬರುವರು ನಿನ್ನಡಿಯಲ್ಲಿ !
ಬೇಡಿದ ಭಾಗ್ಯಗಳೆಲ್ಲಾ
ನೀಡುವೆ ಸ್ವಾಮಿ ನೀನು!!
ದೀಪ ಹಚ್ಚಿ ಧೂಪ ಬೆಳಗಿ
ನಾನು ನಮಿಸುವೆನು ಆ. ಆ. ಆ. ಆ. ॥ ಪ ॥

ಭೈರಾಪುರಕ್ಕೆ ಹೋಗೋಣ ಬಾ
ಮರಿದೇವನ ಜಾತ್ರೆ ನೋಡೋಣ ಬಾ
ತಾತನ ದರ್ಶನ ಮಾಡೋಣ ಬಾ
ಹೆಜ್ಜೆ ಹಾಕುತ್ತಾ ಕುಣಿಯೋಣ ಬಾ
ಭೈರಾಪುರಕ್ಕೆ ಹೋಗೋಣ ಬಾ
ಮರಿದೇವನ ಜಾತ್ರೆ ನೋಡೋಣ ಬಾ
ಮಡಿವಸ್ತ್ರ ಧರಿಸಿ ಮುತ್ತಿನ ಆರುತಿಗಿಳಿದು
ಚಿಕ್ಕೇರಹಳ್ಳಿ ಹಿರೇಕೆರೆಹಳ್ಳಿಯವರು
ನೂರಾರು ಭಕ್ತರು ಬರುತಾರೆ.
ಭೈರಾಪುರಕೆ ಹೋಗೋಣ ಬಾ
ಮರಿದೇವನ ಜಾತ್ರೆ ನೋಡೋಣ ಬಾ
ಮರಿದೇವನಾ ಜಾತ್ರೆ ನೋಡೋಣ ಬಾ ॥ ಪ ॥
ಮದ್ಯಾಹ್ನ ಮಾರಿಯ ದರ್ಶನ ಮಾಡೋಣ ಬಾ
ದೇವರ ಹಟ್ಟಿಗೆ ಹೋಗೋಣ ಬಾ ದೇವರ ಹಟ್ಟಿಗೆ ಹೋಗೋಣ ಬಾ
ದೇವಿಯ ಜಾತ್ರೆ ನೋಡೋಣ ಬಾ
ಮರಿದೇವನ ದರ್ಶನ ಮಾಡೋಣ ಬಾ
ಹೆಜ್ಜೆ ಹಾಕುತ ಕುಣಿಯೋಣ ಬಾ

ಕೆಂಚಮ್ಮನ ಪಾದಕ್ಕೆ ನಮಿಸುವೆ ನಾ

ಮಾರೆಮ್ಮ ಪೂಜೆಯನ್ನು ಮಾಡುವಾ

ಊರಮ್ಮ ಪೂಜೆಯನ್ನು ಮಾಡುವಾ

ದೇವಿ ಪಾದದ ಹೂವನ್ನು ಪಡೆಯುವ

ಭಂಡಾರ ಹಣೆಗೆ ಹಚ್ಚಿಕೊಳ್ಳುವ

ಭೈರಾಪುರಕೆ ಹೋಗೋಣ ಬಾ

ಮರಿದೇವ ತಾತನ ಜಾತ್ರೆಯ ನೋಡೋಣ ಬಾ

ತಾತನ ದರ್ಶನವ ಮಾಡೋಣ ಬಾ

## ಮರಿದೇವ ಓ ಮರಿಸ್ವಾಮಿ

ಭೈರಾಪುರ ಗ್ರಾಮದ ಬೆಳಗುವ ತಾತ

ಎರಬಳ್ಳಿ ಮಾರೆಮ್ಮಳ ಕಾಪಾಡು ತಾತ

ಶ್ರೀ ಬಳ್ಳಾರಿ ಮರಿಯೋಗಿಮಠದ ಉತ್ಸವ ನೀನು

ಬೆಂಗಳೂರಿನಲ್ಲಿ ಮರಿಸ್ವಾಮಿ ನೀನು

ನಿಜಗಲ್ ಊರಲ್ಲಿ ಮಹದೇವ ನೀನು

ಕಲಬುರ್ಗಿ ಭಕ್ತರ ಮನದಲ್ಲಿ ನೀದು

ಓ ಮರಿದೇವ ಮರಿದೇವ ॥ ಭೈ ॥

ನೊಂದವರ ನೋವ ತೀರಿಸು

ಇಂದು ಬಂದವರ ತಾಪ ನಂದಿಸು

ಶ್ರೀ ಶರಣೆಂದು ಬೇಡುವ ಮರಿತಾತ

ಆದರೆ ಮನದೊಳ್ ಜೀವಂತ ನುಡಿಯೊಳ್

ಆನಂದ ನಮಗೆ ನೀಡುಬಾ ಆದರೆ ನಿನಗಾಗಿ

೨

ಭಂಡಾರ ನೀಡಿ ಮಮತೆಯ ತೋರು ಬಾ

ಬಾಳನ್ನು ಬಾಡದ ಹೊಲನ್ನು ಮಾಡು ಬಾ

ಭಕ್ತರು ಬೇಡುವ ಭಾಗ್ಯದ ತೋರುವ ಬಾ

ಜಾತಿಯ ಬೇದವ ದೂರಕ್ಕೆ ತಳ್ಳುವ ಬಾ

ಯಾನೆಯ ಹೇಳಲು ನಿನ್ನನ್ನು ಬೇಡಾಲು ಬಾ

ಸುಕಕಾಲ ನಮಗೆ ನೀಡುವ ಬಾ

ಹಾರಾವ ಹಾಕೇವು ಮಾರುವ ಇಳಿಸು

ಬೇರ್‍ಯಾರು ಜೊತೆಯಲ್ಲಿ ಇಲ್ಲದೆಪ್ಪ

ಧೂಪಾನ ಹಾಕೇವು ಪಾಪವ ಕಳಿತಾತ

ದೀಪಾವ ಬೆಳಗುವೆವು

ಕಷ್ಟ ನಷ್ಟವು ಎಲ್ಲವು ಇಇಳಿಸಲು ಬಾ

ಇಷ್ಟಾವ ನೀಡಲು ನಮ್ಮನ್ನು ಸಲಹುವ ಬಾ

ಗಾಳಿಯ ಕೀರ್ತಿಯು ನೀಡುವ ನಮ್ಮನ್ನು ಸಲಹುವ ಬಾ

ಗಾಳಿಯ ಕೀರ್ತಿಯು ಎಲ್ಲವು ಹೇಳಲು ಬಾ

ಪಾಪಾದ ಮಂತ್ರಾದ ಭೀತಿಯ ತೀರಿಸು ಬಾ

ನಿನ್ನಯ ನಾಡಿದು ಇಳಿದು ಬಾ

ನಾನಾ ವಿಧಧ ಪೂಜೆಯ ಮಾಡಲು

ಪೂಜಾ ವಿಧಗಳು ತಂದೆವು ಬಾ

೩

ಏರುತ ಮಂದಿರ ದೀಪವನ್ನ ಬೆಳಗಿದೆ

ಭಕ್ತರ ಮನದಲ್ಲಿ ನೆಲೆಸಿ ಬಿಟ್ಟೆ

ಕೆಟ್ಟೋರಿಗೆಲ್ಲ ಬುದ್ಧಿಯ ಕಲಿಸಿದೆ.

ಪರೀಕ್ಷೆ ಮಾಡೋರಿಗೆ ಶಿಕ್ಷೆಯ ವಿಧಿಸಿದೆ

ಅಲಕ್ಷ್ಯ ಮಾಡಿದವರಿಗೆ ಪಾಠವ ಕಲಿಸಿದೆ.

ನಂಬಿದ ಭಕ್ತರಿಗೆ ಕೈ ಹಿಡಿದು ಕಳಿಸಿದೆ.

ಬೇಡುತ ಬಂದವರಿಗೆ ಬೆಂಬಲ ಕೊಟ್ಟಿದ್ದೆ

ಕೋರಿಕೆ ನೀಡಲು ತೀರಿಸಲು ಕಾಪಾಡು ಬಾ

ವಂಶದ ಕುಡಿಯನು ಬೆಳೆಸು ಬಾ

ಕೈ ಮುಗಿದು ನಿಂತೇವು ನಮ್ಮನ್ನ ಉಳಿಸು

ಶ್ರೀ ಶರಣೆಂದು ಬೇಡುವೆವು ಬಾ ತಾತ

ಆದರೆ ತೋರು ಆಸರೆ ನೀಡು

ಲಿಂಗಾಯತ ಮನೆಗೆ ಒಪ್ಪಾದ ಪೂಜೆಗೆ

ನೀ ಒಲಿದು ಬಾ

ಇಕ್ಕಟ್ಟು ಬಿಕ್ಕಟ್ಟು ತೀರಿಸಲು ನಂಬಿ

ಬಂದೇವು ನಾವು

ಮರಿಸ್ವಾಮಿ ತಾತ ಎಂದು

ಊರು ಊರಿನಲ್ಲಿ ಹಲವು ಹೆಸರಿನಲ್ಲಿ
ನೆಲಸಿದ ಮರಿಯೋಗಿ
ಮರಿದೇವ ಮರಿಸ್ವಾಮಿ ಮರಿಯೋಗಿ
ಎಲ್ಲಾ ನೀನೆ ಬಾ ಸ್ವಾಮಿಯೇ
ಬಳ್ಳಾರಿ ಕ್ಷೇತರದಲ್ಲಿ ನೆಲೆಸಿರುವಂತಾ
ಶ್ರೀ ಮರಿಸ್ವಾಮಿ ಪುಂಗವನು
ಬೆಂಗಳೂರು ನಗರದಿ ಮರಿಯೋಗಿ ನೀನೆ
ನಿಜಗಲ್ ಮರಿಸ್ವಾಮಿ ನೀನೆ
ಭೈರಾಪುರದ ಮರಿಸ್ವಾಮಿ ನೀನೆ
ನಮ್ಮನ್ನು ಸಲಹು ತಂದೆ ನೀನೆ
ಎಲ್ಲಾರ ಬೇಡಿಕೆ ತೀರಿಸುವಂತ ಕರುಣಾ
ಮೂರುತಿ ನೀನೆ
ಊರು ಊರಲ್ಲಿ ಹಲವು ಹೆಸರಿನಲ್ಲಿ
ನೆಲೆಲಸಿರುವ ದೇವರು ನೀನು
ಕಲಬುರ್ಗಿ ಪಟ್ಟಣದಲ್ಲಿ ನೆಲೆಸಿರುವಂತಹ
ಮಹದೇವ ನೀದು
ಬಂಧಿಸು ಭಕ್ತರ ಕುಂದನ್ನು ತೀರಿಸು
ಸಂತಾಪ ನೀಡಿ ಸಲಹು ತಂದೆ ॥ ಪ ॥
ಅಡ್ಡಾ ಬಿದ್ದೇವು ತಂದೆ ನಿನ್ನ ಪಾದಕೆ ಸಲಹು
ಬಂಜೆಯ ತೊಡ್ಡಿಲನ್ನು ತೂಗುವ
ಭಾಗ್ಯವನ್ನು ನೀಡು ಬಾ ತಂದೆ
ಓ ಮರಿಸ್ವಾಮಿ ದಯೆ ತೋರಿ
ನೀನು ನಮಗೆಲ್ಲಾ ಶುಭ ನೀಡು ತಂದೆ
ಶುಕ್ರವಾರ ಸೋಮವಾರ ನಿನ್ನ
ಪೂಜೆಯ ಮಾಡೇವು

ಸುಖದ ಸಿರಿಯ ನಮಗೆ ನೀಡುವ ಬಾ
ಬೆಳಗಾಯಿತು ಬೇಗ ಏಳು ತಂದೆ
ಓಂ ಶಕ್ತಿ ಮಹಾತಾತ
ಬೆಳಗಿನ ಗೀತೆ ಏಳಪ್ಪ
ಭಕ್ತರಿಗೆ ಅಭಯ ನೀಡಪ್ಪ
ಓ ಭೈರಾಪುರದ ಮರಿಸ್ವಾಮಿ ನೀನಪ್ಪ
ಬೆಳಗಾಯಿತು ಬೇಗ ಏಳಪ್ಪ
ಓಂ ಶಕ್ತಿ ಮಹಾತಾತ
ಪುಜಾರಿಗಳು ಒಕ್ಕಲಿನವರು
ಭಕ್ತರು ಹೂಗಳ ತಂದವರಪ್ಪ
ಹಾಲನ್ನು ಎರೆಯಲು ಗೊಲ್ಲರ ಬಂದರು
ನಿನ್ನ ತಂಗಿಯ ಕಂಡೇವು ತಾತನೆ
ನಿನ್ನ ದರ್ಶನ ಬಯಸಿ ಬಂದಳು
ನಿತ್ಯ ನೀಡಪ್ಪ ಎದ್ದು ಬಾ
ನಮ್ಮ ಬಾಳಿಗೆ ಬೆಳಕು ನೀಡು ಬಾ
ಬೆಳಗಾಯಿತು ಬೇಗ ಹೇಳು
ಓಂ ಶಕ್ತಿ ಮಹಾ ತಾತ
ಹರಕೆಯ ಹೊತ್ತು ಭಕುತರು ನಿನಗೆ
ಕಾಣಿಕೆಗಳನ್ನು ತಂದಾರಪ್ಪ
ಬಂದಿರುವ ಭಕ್ತರಿಗೆ ಶುಭ ನೀಡು ಬಾ
ಪಾನಕ ಬಂಡಿಯ ಗುಟ್ಟು ಭಕ್ತರ
ಮನದ ಬಯಕೆ ನೇಗಿ ನೀಡಲು
ನಮ್ಮನ್ನು ಸಲಹು ನೀಡು ಬಾ
ಬೆಳಗಾಯಿತು ಬೇಗ ಹೇಳು ಬಾ
ಓಂ ಶಕ್ತಿ ಮಹಾತಾತ

ಜನಪದರು ಕೇವಲ ಮನುಷ್ಯರ ಭಾವೈಕ್ಯತೆಯ ಅರ್ಥವನ್ನು ತಿಳಿದುಕೊಳ್ಳುವ ಸಲುವಾಗಿ ಜಾತಿ, ಭೇದ ಇವುಗಳನ್ನು ತೊರೆಯುವ ಸಲುವಾಗಿ ದೇವ ದೇವರುಗಳ ಮಧ್ಯ ಬಾಂಧವ್ಯವನ್ನು ಬೆಸೆಯುವಲ್ಲಿ ಜನಪದರು ಬಹಳ ಬುದ್ಧಿವಂತರು. ಜನಪದರೆಲ್ಲರು ಒಂದೇ ಬಾವೈಕ್ಯತೆುಂದ ಬಾಳೋಣ ಅಣ್ಣ-ತಮ್ಮಂದಿರಂತೆ ನಲಿಯೋಣ ಎಂಬ ಮಹಾದಾಸೆುಂದ ಜನಪದರು ಆಸೆ ಆಕಾಂಕ್ಷೆಗಳನ್ನು, ದು:ಖಗಳನ್ನು ಮನದಾಳದ ದುಗುಡಗಳನ್ನು ನೇರವಾಗಿ ಹೇಳಿಕೊಳ್ಳಲು ಸಶಕ್ತರಾಗಿ ಹಾಡುಗಳ ಮೂಲಕ ವ್ಯಕ್ತಪಡಿಸಿದ್ದಾರೆ.

ಶ್ರೀ ಮರಿಸ್ವಾಮಿ ಹಾಗೂ ಈ ಸ್ವಾಮಿಯ ತಂಗಿಯಾದ ಯರಬಳ್ಳಿ ಮಾರೆಮ್ಮ ದೇವಿಯ ಕುರಿತು ಬರೆದಂತಹ ಒಂದು ಹಾಡು

೪. ನಡಿಯೋ ನೀ ನಡಿಯೋ ಭೈರಾಪುರಕೆ
ಶಿರ ಬಾಗಿ ಕರ ಮುಗಿಯೋ
ಮಾತು ಮಾತಲ್ಲಿ ಮರಿದೇವನ ನೀ ನೆನೆಯೋ
ಯರಬಳ್ಳಿ ಮಾರೆಮ್ಮಗೆ ಕರವ ಮುಗಿಯೋ
ಕರುಣಿಸು ದೇವಿ ಕರುಣಿಸು ತಾತ ನಿಮ್ಮ ಮಗ ನಾನು
ನಡೆಯೋ ನೀ ನಡೆಯೋ ಭೈರಾಪುಕೆ
ಶಿರ ಬಾಗಿ ಕೈ ಮುಗಿಯೋ ಮರಿದೇವನ ಪಾದಕ್ಕೆ ॥ ಪ ॥

ದೇವರ ತಮ್ಮಣ್ಣ ಇದ್ದಾನಲ್ಲೆಮ್ಮ
ದೆವ್ವ ಭೂತಗಳ ಓಡಿಸುವ ನಮ್ಮ
ಕರದಲ್ಲಿ ಬೆಂಕಿ ಮನದೋಳು ಶಾಂತಿ
ಕೊಡುವಂತಾನೆಮ್ಮ
ನಡಿಯೋ ನೀ ನಡಿಯೋ ಭೈರಾಪುರಕೆ
ಶಿರ ಬಾಗಿ ಕರ ಮುಗಿಯುಯೋ ಮರಿದೇವನ ಪಾದಕ್ಕೆ ॥ ಪ ॥

## ೩. ಗಾದೆಗಳು

ಗಾದೆಗಳು ತಮ್ಮ ಅಸ್ತಿತ್ವವನ್ನು ಪರಸ್ಪರ ಆಂತರಿಕ ಸಂಬಂಧವನ್ನು ಹೊಂದಿದವುಗಳಲ್ಲ. ಒಂದು ಗಾದೆ ಇನ್ನೊಂದರಂತೆ ಕಂಡರೂ ಈ ಸಾಮ್ಯವು ಗಾದೆಗಳೆರಡು ತಳೆದಿರುವ ಧೋರಣೆಗಳಾಗಿರುತ್ತವೆ. ಒಂದು ಗಾದೆುಂದ ಇನ್ನೊಂದು ಗಾದೆ ಹುಟ್ಟಿಕೊಳ್ಳಲಾರದು ಇಲ್ಲದೇ ಒಂದು ಗಾದೆಯ ಹುಟ್ಟಿಗೆ ಇನ್ನೊಂದು ಗಾದೆಯ ಮೂಲಕಾರಣವಾಗಲಿ, ಪ್ರೇರಣೆಯಾಗಲಿ ಇರುವುದಿಲ್ಲ. ಮತ್ತು ಅವುಗಳ ಹುಟ್ಟಿನ ಮೂಲ ಕೂಡಾ ಒಂದೇ ಆಗಿರಲು ಸಾದ್ಯವಿಲ್ಲ. ಒಂದು ಅನುಭವಕ್ಕೆ ಒಂದು ಗಾದೆ ಇದಕ್ಕೆ ಕಾರಣ ಮನುಷ್ಯನ ಮನಸ್ಸು ತೀರಾ ಸಂಕೀರ್ಣವಾಗಿರುವದು ಮಾನವನ ಈ ಮನಸ್ಸಿನ ಸಂಕೀರ್ಣತೆ ಎಂತಿಹುದು ಎಂಬುದನ್ನು ಅರಿಯಲು ಗಾದೆಗಳನ್ನು ಅವಲೋಕಿಸಬೇಕು.

ಒಂದೇ ವಿಂಗಡನಾ ಕ್ರಮದಲ್ಲಿ ಒಳಪಡುವ ಗುಣಗಳನ್ನು ಜನಪದ ಕಥೆ ಮತ್ತು ಗಾದೆಗಳು ಹೊಂದಿರುವುದರಿಂದ ಈ ಎರಡು ಸಮಾನಾಂಶಗಳಲ್ಲಿ ಸಂಬಂಧವುಳ್ಳ ಜಾನಪದ ಸೃ ಎನಿಸುತ್ತದೆ. ಗಾದೆಗಳು ಮಾನವನ ವೈಚಾರಿಕ, ಭಾವನಾತ್ಮಕ ನೆಲೆಯಲ್ಲಿ ರೂಪಗೊಂಡ ಜೀವನಾನುಭವದ ಗಟ್ಟಿಗಳು. ಒಂದೊಂದು ಗಾದೆಯೂ ಒಂದೊಂದು ವಿಶಿಷ್ಠ ಅನುಭವದ ಹಿನ್ನೆಲೆಯನ್ನು ಪಡೆದಿರುತ್ತದೆ. ಅಂದರೆ ಪ್ರತಿಯೊಂದು ಗಾದೆಯು ತನ್ನ ಮಡಿಲಲ್ಲಿ ಕಥಾ ಬೀಜವನ್ನು ಮಡಿಗಿಟ್ಟುಕೊಂಡಿರುತ್ತದೆ. ಹಾಗೆಯೇ ಕಥೆಗಳು ಗಾದೆಗಳ ಮೂಲಕ ತಮ್ಮ ಧೋರಣೆಗಳನ್ನು ಸ್ಪಷ್ಟಪಡಿಸುವುದನ್ನು ನೋಡಬಹುದಾಗಿದೆ.

"ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡು" ಎಂಬ ಗಾದೆಯನ್ನು ಒಂದು ಕಥೆ ತನ್ನ ಧ್ಯೆಯವಾಕ್ಯವಾಗಿ ಸ್ವೀಕರಿಸಿದ್ದರೆ, ಪ್ರತಿಯಾಗಿ ಅನೇಕ ನಿದರ್ಶನಗಳು ಈ ಗಾದೆಯ ಹಿಂದ ಬಿತ್ತರಿಸುವ ಉದಾಹರಣೆಯೊಂದನ್ನು ನೋಡಬಹುದಾಗಿದೆ. ಅರಸನ ಶಯ್ಯಗಾರವನ್ನು ಕಾಯುತ್ತಿರುವ ಸಹೋದರ ಮತ್ತು ಹಾವು ಎಂಬ ಕಥೆಯಲ್ಲಿ ' ರಾಜನು ಮನೆಯಲ್ಲಿ ಸರ್ಪ ಕಚ್ಚಿ ಸಾಯುವನು ಎಂಬ ಹಕ್ಕಿಗಳ ಭವಿಷ್ಯ ಕೇಳಿದ ಪ್ರಧಾನಿಯು ಅರಸನನ್ನು ಉಳಿಸಲು ಆತ ಮಲಗುವ ಕೋಣೆಯಲ್ಲಿ ಎಚ್ಚರವಾಗಿ ಕಾಯುತ್ತ ಕುಳಿತನು ರಾತ್ರಿ ಕಚ್ಚಲು ಬಂದ ಹಾವನ್ನು ಕತ್ತರಿಸಿದನು. ಆದರೆ ಹಾವಿನ ವಿಷದ ಒಂದು ಹನಿ ಅರಸನ ಹೆಂಡತಿಯ ಎದೆಯ ಮೇಲೆಬಿದ್ದಿತು ಅದನ್ನು ನಾಲಿಗುಂದ ತೆಗೆಯಲು ಹೋದಾಗ ರಾಣಿಗೆ ಎಚ್ಚರವಾಗಿ ತನಗೆ ಕೆಡಿಸಲು ಬಂದನೆಂದು ಅಪವಾದ ಹೊರಿಸಿದಳು. ರಾಜನು ಪ್ರಧಾನಿಗೆ ಮರಣ ದಂಡನೆ ವಿಧಿಸಿದನು. ಹೀಗೆ ಈ ಕಥೆಯ ಘಟನೆಯು 'ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣಿಸಿ ನೋಡು' ಎಂಬ ಗಾದೆಯನ್ನು ಹುಟ್ಟುಹಾಕುತ್ತದೆ.

ಹೀಗೆ ಗಾದೆಗಳು ಕಥಾಬೀಜಗಳನ್ನು ತಮ್ಮ ಒಡಲಲ್ಲಿ ಹುದುಗಿಸಿಟ್ಟುಕೊಂಡಂತೆ ಕಥೆಗಳು ಗಾದೆಗಳನ್ನು ತಮ್ಮ ಧ್ಯೇಯ ವಾಕ್ಯಗಳಾಗಿ ಸ್ವೀಕರಿಸುವುದನ್ನು ಕಾಣುತ್ತೇವೆ. ಅದರಲ್ಲೂ ಪ್ರಾಣಿ ಕಥಾ ಸಂಕಲನಗಳಾದ ಇಸೋಪನ ನೀತಿ ಕತೆಗಳು, ಪಂಚತಂತ್ರದ ಕಥೆಗಳು, ಪ್ರಾಣಿಗಳ ಮೂಲಕ ಕಥೆಗಳನ್ನು ಹೆಣೆದು, ಗಾದೆಗಳ ಮುಖಾಂತರ ಅವುಗಳ ಧ್ಯೇಯವನ್ನು ಸಾರುತ್ತವೆ. ಗಾದೆಗಳು ಹಲವರ ಅನುಭವಗಳು ವ್ಯಷ್ಟಿಸೃಷ್ಟಿಗಳಾದರೂ ಸಮಷ್ಟಿ ಪ್ರಜ್ಞೆಯುಳ್ಳವುಗಳು ಅದಕ್ಕಾಗಿ ಗಾದೆಗಳು ಹಲವರ ಸೊತ್ತು ಎನಿಸುತ್ತದೆ. ಇದು ಶ್ರೀಸಾಮಾನ್ಯನ ನಾಲಿಗೆಯ ಮೇಲೆ ಹರಿದಾಡುತ್ತಿರುತ್ತದೆ.

ಪ್ರತಿಯೊಂದು ನಾಡಿನ ಜನತೆಯು ಹಿಂದಿನ ಸ್ವಪ್ನಗಳನ್ನು, ನೆನಪುಗಳನ್ನು ಮಾತುಕಥೆ ನಡವಳಿಕೆಯಲ್ಲಿ ಪರಂಪರೆಂದ ಅನೇಕ ಸಂಗತಿಗಳನ್ನು ಹೊತ್ತು ತರುತ್ತವೆ. ಅವು ಪಾರಂಪರಿಕವಾಗಿಯೂ ಮುಂದುವರೆಯಬಹುದು. ಇಂತಹ ನೆನಪುಗಳನ್ನು ಆಚಾರ, ವಿಚಾರ, ಪದ್ದತಿ, ಸಹಿತ್ಯ ಬಗೆಗಳು ಮದ್ದು, ಕ್ರೀಡೆ, ಕಲೆ, ನೃತ್ಯ, ನಾಟಕ, ಉಡುಗೆ– ತೊಡುಗೆ ಮನೋರಂಜನೆ ಮಾಧ್ಯಮಗಳು, ಧಾರ್ಮಿಕ ಕ್ರೀಯೆಗಳು ಜೀವನ ವಿಧಾನ ಮುಂತಾದವುಗಳ ಮೂಲಕ ನಾವು ಅವುಗಳನ್ನು ಮೆಲುಕು ಹಾಕಿಸುತ್ತವೆ. ಇವುಗಳನ್ನು ಪೂರ್ಣವಾಗಿ ಬಳಸಿಕೊಳ್ಳುವ ಚೌಕಟ್ಟನ್ನು ಜಾನಪದ ಎನ್ನುವ ವಿಶಾಲ ಅರ್ಥದಲ್ಲಿ ಕರೆಯುತ್ತಾರೆ. ಅದರಲ್ಲಿ

ಜನಪದ ಸಾಹಿತ್ಯವು ಗೀತೆ, ಲಾವಣಿ, ಕಾವ್ಯ, ಕಥೆ, ಗಾದೆ, ಒಗಟು ಇತ್ಯಾದಿಗಳನ್ನು ಒಳಗೊಂಡ ಜಾನಪದ ಒಂದು ಸಣ್ಣ ಅಂಗ ಮಾತ್ರವಾಗಿದೆ. ನಾಡಿನ ಸಾಂಸ್ಕೃತಿಕ ಚರಿತ್ರೆಯ ಹೊಸ ನಿರ್ಮಾಣಕ್ಕೆ ಕೇವಲ ಅಗತ್ಯವಾದ ಅಂಶಗಳನ್ನು ನಾವು ವಿಶೇಷವಾಗಿ ನೋಡಬಹುದಾಗಿದೆ. ಇಲ್ಲಿ ಮುಖ್ಯವಾದ ಕೆಲವು ಅಂಶಗಳಾದ ಕಥೆ, ಗಾದೆ, ಪುರಾಣ, ಹೀಗೆ ಹಲವು ಅಂಶಗಳನ್ನು ನೋಡಬಹುದು.

**ಗಾದೆ: ೧. ಕೇರಿಗೊಬ್ಬ ಹನುಮಂತ ಊರಿಗೊಂದು ಜಾತ್ರೆ**

ಈ ಮೇಲಿನ ಗಾದೆಯಂತೆ ದೊಡ್ಡ ದೊಡ್ಡ ಊರುಗಳಲ್ಲಿ ಒಂದೊಂದು ಕೇರಿಗೆ ಒಬ್ಬ ಹನುಮಂತರಾಯನ ಗುಡಿ ಇರುವುದನ್ನು ನಾವು ನೋಡಬಹುದು. ಹಾಗಯೇ ಒಂದೊಂದು ಊರಿನಲ್ಲಿ ಒಂದೊಂದು ಜಾತ್ರೆ ಉತ್ಸವವನ್ನು ಈ ಆಧುನಿಕ ಜಗತ್ತಿನಲ್ಲಿಯೂ ಕಾಣಬಹುದು. ಅಂದರೆ ಪ್ರತಿಯೊಂದು ಊರಿನಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನೆಡೆಯುತ್ತದೆ. ಅಂದರೆ ಕಡಿಮೆ ಗೃಹಸಂಖ್ಯೆಗಳಿರುವ ಊರಿನಲ್ಲಿ ಜಾತ್ರೆ ಉತ್ಸವ ನಡೆಯುವದು ಬಹಳ ಕಡಿಮೆ ಹೀಗೆ "ಕೇರಿಗೊಬ್ಬ ಹನುಮಂತರಾಯ ಊರಿಗೊಂದು ಜಾತ್ರೆ" ಎಂಬ ಗಾದೆ ಮಾತಿನಲ್ಲಿ ಹೇಳಿದ್ದಾರೆ.

**ಗಾದೆ: ೨. ಕುಲಕ್ಕೊಂದು ಜಾತ್ರೆ ಜನಕ್ಕೊಂದು ಬುದ್ಧಿ**

ಈ ಗಾದೆಯು ಅಕ್ಷರ ಸಹ ಸತ್ಯವಾಗಿದೆ. ಏಕೆಂದರೆ ಒಂದು ಊರಿನಲಿ ಜಾತ್ರೆ ನೆಡೆಯುತ್ತದೆ. ಎಂದರೆ ಆ ಉರಿನ ಪ್ರಭಲ ಸಮುದಾಯದವರೇ ಆ ಜಾತ್ರೆಯನ್ನು ಮಾಡುತ್ತಾರೆ. ಪ್ರತಿಯೊಂದು ಕುಲದವರು ಒಂದೊಂದು ಜಾತ್ರೆಯನ್ನು ಮಾಡುತ್ತಾಂ. ಹಾಗೆಯೇ ಆ ಜಾತ್ರೆಗೆ ಬಂದಂತಹ ಜನರ ಬುದ್ದಿಯು ಸಹ ನಾನಾ ರೀತಿಯದ್ದಾಗಿರುತ್ತದೆ. ಎಲ್ಲರ ಬುದ್ದಿ ಒಂದೇಯಾಗಿರುವುದು ಅಸಾದ್ಯ. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ನಮ್ಮ ಹಿರಿಯರು "ಕುಲಕ್ಕೊಂದು ಜಾತ್ರೆಯಾದರೆ ಜನಕ್ಕೊಂದು ಬುದ್ದಿ" ಎಂಬ ಗಾದೆಯನ್ನು ವ್ಯಕ್ತಪಡಿಸಿದ್ದಾರೆ.

**ಗಾದೆ: ೩. ಜಾತ್ರೆಗೆ ಹೋದವರು ಪಾತ್ರೆ ತರದೇ ಬರಬಾರದು**

ಪ್ರತಿಯೊಬ್ಬರೂ ಜಾತ್ರೆಗೆ ಹೋಗಬೇಕೆಂದು ಸುಮಾರು ಒಂದು ವರ್ಷದಿಂದ ಹಣವನ್ನು ಸಂಗ್ರಹಿಸಿಕೊಂಡು ಜಾತ್ರೆ ಬರುವಾಗ (ಅಂದರೆ ಅವರು ಅಂದುಕೊಂಡ ಜಾತ್ರೆ ಬಂದಾಗ ಅಥವಾ ಯಾವುದೇ ಜಾತ್ರೆಯಾಗಿರಬಹುದು) ಉದಾ: ಹುಲಿಗೆಮ್ಮ, ಮಾರೆಮ್ಮ, ಎಲ್ಲಮ್ಮ, ಮರಿಸ್ವಾಮಿ, ವೀರಭದ್ರ, ಹೀಗೆ ಇತ್ಯಾದಿ ಜಾತ್ರೆಗೆ ಹೋದಂತಹ ಸಂದರ್ಭದಲ್ಲಿ ಈ ಜನಪದರು ಜಾತ್ರೆಗೆ ಹೋದರು ಬರಿಕೈಲೆ ಬರುವುದೇ ಇಲ್ಲ. ಅದರಲ್ಲಿ ವಿಶೇಷವಾಗಿ ಸ್ತ್ರೀಯರು ಪಾತ್ರೆಗಳನ್ನು ತರುತ್ತಾರೆ. ಅವರ ಉದ್ದೇಶ ಅಡುಗೆ ಮಾಡಲು ಪಾತ್ರೆ ಇಲ್ಲವೆಂದಲ್ಲ. ಆ ಆಚರಣೆಯ ನೆನಪಿಗೋಸ್ಕರ ಅವುಗಳನ್ನು ಖರಿದಿಸಿಕೊಂಡು ತರುತ್ತಾರೆ.

**ಗಾದೆ: ೪. ಹಬ್ಬ ಊಟಕ್ಕೆ ಚಂದ ಜಾತ್ರೆ ನೋಟಕ್ಕೆ ಚಂದ**

ಈ ಗಾದೆಯು ಬಹಳ ಅರ್ಥಪೂರ್ಣವಾದಂತದ್ದು, ಹಿರಿಯರು ಹೇಳಿದ ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ನಾಣ್ನುಡಿಯಂತೆ ಈ ಗಾದೆಗಳು ಮಹತ್ವವಾದವು. ವಾರ್ಷಿಕಾವಧಿಯಲ್ಲಿ ಬರುವಂತಹ ಹಬ್ಬಗಳು ಊಟಕ್ಕೆ ಚಂದವಾಗಿರುತ್ತವೆ. ಏಕೆಂದರೆ ಅಲ್ಲಿ ನೋಡುವಂತಹ ವಸ್ತುಗಳು ಜನಪದ ಕಲೆಗಳು ಅಷ್ಟೊಂದು ಇರುವುದಿಲ್ಲ. ಇದ್ದರೂ ಅವು ವಿಶೇಷವಾಗಿ ಕಾಣಲಾರವು. ಆದರೆ ಊಟಕ್ಕೆ ಮಾತ್ರಹಬ್ಬದ ದಿನದಂದು ದೈನಂದಿನ ಊಟಕ್ಕಿಂತ ಭಿನ್ನವಾಗಿರುವುದರಿಂದ ಅಂದು ಬಹಳ ತೃಪ್ತಿಯಾಗುವತನಕ ಊಟ ಮಾಡುತ್ತಾರೆ. ಅದೇ ರೀತಿ ಜಾತ್ರೆ ನೋಟಕ್ಕೆ ಮಾತ್ರ ಚೆಂದವಾಗಿರುತ್ತದೆ. ಅಲ್ಲಿ ಸಾವಿರಾರು ಜನಸಂಖ್ಯೆಯಿಂದ ಪರಿಚಿತರು ಅಪರಿಚಿತರೂ, ಗಂಡು ಹೆಣ್ಣು, ಚಿಕ್ಕವರು ದೊಡ್ಡವರು, ಎಂಬ ಬೇದ ಭಾವ ಇಲ್ಲದೇ ಎಲ್ಲರೂ ಒಂದಡೇ ಸೇರುವುದರಿಂದ ಅದೇ ನೋಡುವುದಕ್ಕೆ ಮಾತ್ರ ಚಂದವಾಗಿರುತ್ತದೆ.ಅಲ್ಲಿ ತಿಂಡಿ ತಿನಿಸುಗಳನ್ನು ತಿಂದರೆ ರೋಗವನ್ನು ಹಣ ಕೊಟ್ಟು ಕೊಂಡಂತೆ ಎಂಬ ನಂಬಿಕೆಯಿಂದ ತಿನ್ನುಉದು ಕಡಿಮೆ.

**ಗಾದೆ: ೬. ಹೋಳಿಗೆ ಇಲ್ಲದ ಹಬ್ಬ ಅಲ್ಲ, ರಥ ಇಲ್ಲದ ಜಾತ್ರೆ ಅಲ್ಲ.**

ಜನಪದರು ಹಬ್ಬ ಮಾಡಿದರೆ ಊಟಕ್ಕೆ ಹೋಳಿಗೆ ಮೊದಲ ಸ್ಥಾನದಲ್ಲಿರುತ್ತದೆ. ಪ್ರತಿಯೊಬ್ಬರ ಮನೆಯಲ್ಲಿಯೂ ಹೋಳಿಗೆ ಮಾಡಿರುತ್ತಾರೆ. ಈ ಜನಪದರು ದೇವರ ನೈವೇದ್ಯಕ್ಕೆ ಹೋಳಿಗೆಯೇ ಅಗ್ರಸ್ಥಾನದಂತೆ ಕಾಣುತ್ತದೆ. ಅಡುಗೆಯಲ್ಲಿ ಉತ್ತಮವಾದ ಅಡುಗೆ ಎಂದರೆ ಹೋಳಿಗೆ ಅದರಂತೆ ಜಾತ್ರೆಯಲ್ಲಿ ಮುಖ್ಯವಾಗಿ ರಥ ಇಲ್ಲದೆ ಜಾತ್ರೆಯೇ ಯಾಕೆಂದರೆ ತೇರು ಎಳೆಯುವ ಸಂದರ್ಭ ಜನಪದರಿಗೆ ವಿವಿಧ ದೃಕೋನದಿಂದ ಶ್ರೇಷ್ಠವಾದುದು. ರಥವಿಲ್ಲದೇ ಜಾತ್ರೆ ಜಾತ್ರೆಯೇ ಅಲ್ಲಸತ್ಯವಾಗಿಯೂ ನಿಜವಾದುದು. ಈ ಗಾದೆಯಲ್ಲಿ ಶ್ರೇಷ್ಠತೆಯನ್ನು ಎತ್ತಿ ತೋರಿಸುವಂತಹ ಗಾದೆ ಮಾತಾಗಿದೆ. ಈ ನಮ್ಮ ಜನಪದರು ಅವಿದ್ಯಾವಂತರಾದರೂ ಬುದ್ದಿಯಲ್ಲಿ ಚಾಣಕ್ಷರು.

**ಗಾದೆ: ೭. ಜಾತ್ರೆಯು ಮುಗಿಯಿತು ದೋತ್ರವು ಹರಿಯಿತು.**

ಈ ಗಾದೆಯು ಆರ್ಥಿಕತೆಯನ್ನು ಸೂಚಿಸುವಂತಹ ಗಾದೆಯಾಗಿದೆ. ಇಲ್ಲಿ ಜಾತ್ರೆ ಎಂದ ಕೂಡಲೇ ಜನರ ನೆನಪಿಗೆ ಬರುವುದು ಹಣ. ಈ ಹಣದ ಹೂಡಿಕೆಗಾಗಿ ಹಗಲು ರಾತ್ರಿ ಬೆವರು ಸುರಿಸಿ ಸಂಪಾದನೆ ಮಾಡಿ ಕೊನೆಯಲ್ಲಿ ಸಾಲವನ್ನಾದರು ಮಾಡಿ ಜಾತ್ರೆಗಳನ್ನು ಮಾಡುತ್ತಾರೆ. ಅಂದು ಎರಡು ಮೂರು ದಿನಗಳ ಕಾಲ ಸಂತೋಷವಾಗಿ ಜಾತ್ರಾ ಉತ್ಸವವನ್ನು ಮುಗಿಸಿಕೊಂಡು ಹಿಂದಿರುಗಿದಾಗ ಸಾಲದ ಬಾದೆ, ಮನೆಯಲ್ಲಿ ದೈನಂದಿನ ವಸ್ತುಗಳ ಕೊರತೆ ಆಗ ಅವನಿಗೆ ದೋತ್ರ ಹರಿದಂತೆಯಾಗುತ್ತದೆ. ಅಂತಹ ಸಂದರ್ಭದಲ್ಲಿ ಗಾದೆಗಳನ್ನು ಹೇಳುವಂತದ್ದು.

ಗಾದೆ: ೮. ಜಂಬ ಮಾಡಿ ಜಾತ್ರೆಗೆ ಹೋದರೆ ಕೂಸಿನ ಕೈಯಲ್ಲಿ ಕಾಸಿನ ಕಡಲೆಲ್ಲ.

ಪುರುಷರು ಜಾತ್ರೆ ಎಂದಾಕ್ಷಣ ಜಾತ್ರೆಯಲ್ಲಿ ಜಾತ್ರೆ ಮಾಡಲು ಹೋಗುವುದಿಲ್ಲ. ಅಲ್ಲಿ ಬೇರೆ ರೀತಿಯ ಗುರಿಯನ್ನಿಟ್ಟುಕೊಂಡು ಕೈಯಲ್ಲಿ ಸ್ವಲ್ಪ ಹಣವಿದ್ದರೂ ಸಹ ಜಂಬ ಮಾಡಿಕೊಂಡು ನಾನು ಜಾತ್ರೆಗೆ ಹೋಗುತ್ತೇನೆ ಎಂದು ಎಲ್ಲರ ಮುಂದೆ ಹೇಳಿಕೊಳ್ಳುತ್ತಾರೆ . ಆದರೆ ಜಾತ್ರೆಯಲ್ಲಿ ಅಲ್ಪಸ್ವಲ್ಪ ವಿರುವ ಹಣವನ್ನೆಲ್ಲಾ ಖರ್ಚು ಮಾಡಿಕೊಂಡು ಮಜ ಮಾಡಿ ಮನೆಗೆ ಮರಳುವ ಸಂದರ್ಭದಲ್ಲಿ ಕೂಸಿನ ಕೈಯಲ್ಲಿ ಒಂದು ಕಾಸಿನ ಕಡ್ಲೆರುವುದಿಲ್ಲ.

ಈ ಮೇಲಿನ ಎಲ್ಲಾ ಗಾದೆಗಳು ಸತ್ಯತೆಯಿಂದ ಕೂಡಿವೆ. ಇವು ಜೀವನದಲ್ಲಿ ಕಂಡುಕೊಂಡಂತಹ ಅನುಭವದ ಹಿನ್ನಲೆಯನ್ನು ಪಡೆದಿರುತ್ತದೆ. ಅಂದರೆ ಪ್ರತಿಯೊಂದು ಗಾದೆಯು ತನ್ನ ಮಡಿಲಲ್ಲಿ ಕಥಾ ಬೀಜವನ್ನು ಮಡಗಿಟ್ಟುಕೊಂಡಿರುವುದನ್ನು ಈ ಗಾದೆಗಳಲ್ಲಿ ಧೋರಣೆಗಳನ್ನು ನೋಡಬಹುದು. ಈ ರೀತಿ ಗಾದೆಗಳು ಪ್ರತಿಬಿಂಬಿಸುತ್ತವೆ.

## ೪. ಒಗಟುಗಳು

ಭೈರಾಮುರದಲ್ಲಿ ಒಗಟುಗಳಿಗೆ ನಿರ್ದಿಷ್ಟ ಸಾಮಾಜಿಕ ಹಿನ್ನಲೆಯೇನೂ ಇಲ್ಲ. ಹೊಲ, ಮನೆಯ ಸಾಮಾನ್ಯ ಕೆಲಸಗಳ ನಡುವೆ ಮತ್ತು ಜಾತ್ರೆಯ ಸಂದರ್ಭದಲ್ಲಿ ಸಂಬಂಧಿಕರು ಅಥವಾ ನೆಂಟರ ಜೊತೆ ಒಗಟುಗಳ ಜಿದ್ದಾಜಿದ್ದಿ ಬೀಳುತ್ತದೆ. ಹೀಗೆ ಮಾತಿಗೆ ಮಾತು ಬಂದಾಗ ಕೆಲವೊಮ್ಮೆ ಖುಯಾಗಿ ಕೆಲವೊಮ್ಮೆ ತಮ್ಮ ಜಾಣತನದ ಪ್ರದರ್ಶನಕ್ಕಾಗಿಯೂ ಒಗಟುಗಳನ್ನು ಒಪ್ಪುವದುಂಟು. ಗಾದೆಗಳನ್ನು ಹೇಳಲು ಒಂದು ವಯಸ್ಸಿನ ಅನುಭವದ ಅರ್ಹತೆ ಬೇಕುಆದ್ದರಿಂದಲೇ ಮಕ್ಕಳು ಗಾದೆ ಹೇಳುವುದಿಲ್ಲ. ಕೆಲವೊಮ್ಮೆ ಇವರು ಹೋಲಿಕೆಗಳನ್ನು ನುಡಿಗಟ್ಟುಗಳನ್ನು ತಮ್ಮ ಮಾತುಗಳಲ್ಲಿ ಬಳಸುವುದುಂಟಾದರೂ ದೊಡ್ಡವರ ನುಡಿಗಳಷ್ಟು ಅವು ವೈವಿಧ್ಯಮಯವಾಗಿರುವುದಿಲ್ಲ. ಆದರೆ ಸಾಮಾನ್ಯ ಒಗಟುಗಳಿಗೆ ಈ ಯಾವ ಲಿಂಗ ವಯಸ್ಸಿನ ಅರ್ಹತೆಗಳ ಒತ್ತಾಯವಿರುವುದಿಲ್ಲ. ಮಗು ಚೆನ್ನಾಗಿ ಮಾತನಾಡಲು ಕಲಿಯುತ್ತಿದ್ದಂತೆ ಮೊದಲು ಪುಟ್ಟ ಪುಟ್ಟ ಪದ ಕಥೆಗಳನ್ನು ಹೇಳಿ ಕೊಟ್ಟಿದ್ದನ್ನು ಹೇಳಲು ಪ್ರಯತ್ನಿಸಿ, ಮುಂದೆ ತನ್ನ ಸಾಮಾನ್ಯ ಅನುಭವಕ್ಕೆ ಗ್ರಾಹ್ಯವಾಗುವ ಒಗಟುಗಳನ್ನು ಹೇಳುವ-ಬಿಡಿಸುವಪ್ರಯತ್ನಕ್ಕೆ ತೊಡಗುತ್ತದೆ.

ಸಾಮಾನ್ಯ ಒಗಟುಗಳ ಸಂದರ್ಭದಲ್ಲಿ ಆ ಕ್ರಿಯೆಯಲ್ಲಿ ತೊಡಗಿದವರ ಲಿಂಗ, ವಯಸ್ಸು ನೇರವಾಗಿ ಪ್ರಭಾವ ಬೀರದಿದ್ದರೂ ಕೆಲವೊಂದು ಒಗಟುಗಳ ಮೇಲೆ ಆ ಅಂಶಗಳು ಪ್ರಭಾವ ಬೀರುವುದನ್ನು ಅಲ್ಲಗಳೆಯುವಂತಿಲ್ಲ. ಉದಾ: ಲೈಂಗಿಕ ವಿವರಗಳನ್ನುಳ್ಳ ಒಗಟುಗಳು ಸಮ ವಯಸ್ಸಿನ, ಸಮಾನ ಸ್ಥಾನಮಾನದ ಸ್ತ್ರೀ ಪುರುಷರ ನಡುವೆ ಹೆಚ್ಚಾಗಿ ಕ್ರಿಯಾತ್ಮಕವಾಗುವುದುಂಟು. ಭಿನ್ನ ಲಿಂಗಗಳಿದ್ದಾಗ ಹೆಚ್ಚು ರಂಜನೆಯನ್ನುಂಟು ಮಾಡುವುದರಿಂದ ಆಗ ವಿಶೇಷವಾಗಿ ಈ ಒಗಟುಗಳ ಪ್ರದರ್ಶನಗೊಳ್ಳಬಹುದು.

ಒಗಟು ಕ್ರಿಯೆ ಯಶಸ್ವಿಯಾಗಬೇಕಾದರೆ ಇದರಲ್ಲಿ ಕನಿಷ್ಠ ಇಬ್ಬರು ಪಾಲ್ಗೊಂಡಿರಬೇಕು. ಒಬ್ಬ ಒಗಟು ಹೇಳುವವ ಇನ್ನೊಬ್ಬ ಉತ್ತರ ಕೊಡುವವ ಕೇಳುಗರಿದ್ದರೆ ಈ ಕ್ರಿಯೆ ಹೆಚ್ಚು ವೈವಿಧ್ಯಮವಾಗಿ ಬಹುಕಾಲ ನಡೆಯಲು ಸಾಧ್ಯವಾಗುತ್ತದೆ. ಇಂಗ್ಲೀಷನಲ್ಲಿ ಈ ಮೂವರನ್ನು ಕ್ರಮವಾಗಿ Performer, Respondent ಹಾಗೂ Audiene ಎಂದು ಕರೆಯುತ್ತಾರೆ. ಇವರನ್ನು ಕನ್ನಡದಲ್ಲಿ 'ಒಡ್ಡುಗ' ಒಡಸುಗ ಹಾಗೂ ಕೇಳುಗ ಎಂದು ಕರೆಯಬಹುದಾಗಿದೆ. ಈ ಮೂವರು ಯಾವ ಯಾವ ಸ್ಥಾನದಲ್ಲಿದ್ದಾರೆ ಅದೇ ಸ್ಥಾನವು ಅವರಿಗೆ ಖಾಯಿಂ ವಾದುದಲ್ಲ ಅವರು ತಮಗೆ ಇಷ್ಟವಾದುದರಲ್ಲಿ ಭಾಗವಹಿಸಬಹುದು. ಪರಸ್ಪರ ಮುಖಾಮುಖಿಯಾಗುವುದು ಒಗಟಿನ ಮುಖ್ಯ ಲಕ್ಷಣವಾದ್ದರಿಂದ ಈ ವರ್ತನೆ ಅನಿವಾರ್ಯವಾಗುತ್ತದೆ. ಒಗಟುಗಳ ಪ್ರಕಾರಗಳನ್ನು ಕಾಣಬಹುದು. ಬಿಡಿ ಒಗಟು, ಸರಣಿ ಒಗಟು, ಕಥೆ ಒಗಟು, ಹಾಡಿನ ಒಗಟು ಇತ್ಯಾದಿ ಕಂಡು ಬಂದಿವೆ. ಜನಪದ ಸಾಹಿತ್ಯದ ಒಂದು ಸಾಮಾನ್ಯ ಲಕ್ಷಣವೆಂದರೆ ಸಾರ್ವತ್ರಿಕತೆ ಅದರಲ್ಲೂ ಜನಪದ ಕಥೆ ಗಾದೆ ಹಾಗೂ ಒಗಟುಗಳ ರೂಪ-ಲಕ್ಷಣಗಳು ಪ್ರಪಂಚದಾದ್ಯಾಂತ ಒಂದೇ ಬಗೆಯಾಗಿ ದೊರೆಯುವುದೆಂದು ಸೋಜಿಗದ ಸಂಗತಿ. ಇವುಗಳ ನಿರ್ಮಾಣದ ಹಿಂದೆ ಮಾನವನ ಆಲೋಚನೆ ಮತ್ತು ಅಭಿವ್ಯಕ್ತಿಗಳ ಮಾತ್ರವಲ್ಲ ಅವನ ಭಾವನೆಗಳು ರೂಪಿಸುವ ಸಮಾನ ಲಯದ ಭಾಕ ಮಾದರಿಗಳ ಬಗ್ಗೆಯೂ ನಾವು ಚಕಿತರಾಗಬೇಕಾಗುತ್ತದೆ. ಕಥೆಗಳು ಮಾನವನು ತುಳಿದು ಬಂದ ನಾಗರೀಕತೆಯ ಪಳಯುಳಿಕೆಗಳೆಂದು ಹೇಳುತ್ತೇವೆ. ಗಾದೆಗಳು ಮಾನವನ ಅನುಭವಗಳ ಸಾರ್ವತ್ರಿಕತೆಯನ್ನು ಸಾರಿದರೆ, ಒಗಟುಗಳು ಅವನ ಬೌದ್ಧಿಕ ಜಾಣ್ಮೆಯ ಸಮಾನತೆಯನ್ನು ಸಾರಿ ಹೇಳುತ್ತವೆ.

ಒಗಟುಗಳು ಆ ಕಡೆ ಸಂಪೂರ್ಣವಾಗಿ ಗದ್ಯಮಾದರಿಗಳು ಆಗದೆ. ಈ ಕಡೆ ಪರಿಪೂರ್ಣವಾಗಿ ಪದ್ಯಗಳು ಆಗದೇ, ಗದ್ಯ ಪದ್ಯಗಳೆರಡರ ಲಕ್ಷಣಗಳನ್ನು ತಮ್ಮಲ್ಲಿ ಇಂಗಿಸಿಕೊಂಡು ರೂಪು ಪಡೆದ ಪ್ರಕಾರಗಳಿವು. ಶಿವಶರಣರು ಜನಪರ ದೃಷ್ಟಿಯ ಜೊತೆಗೆ ಶ್ರೀ ಜನಸಾಮಾನ್ಯರಿಗಾಗಿ ಸಹಜವಾಗಿ ಕಟ್ಟಬಹುದಾದ ಮಾಧ್ಯಮದ ಹುಡುಕಾಟದಲ್ಲಿ ಶ್ರೀಸಾಮಾನ್ಯರಿಂದಲೇ ಬಳಕೆಯಲ್ಲಿರುವ ಒಗಟು, ಒಡಪು ಮತ್ತು ಗಾದೆಗಳಂಥ ಮಾದರಿಗಳ ಕಡೆಗೆ ಗಮನ ಹರಿಸಿದಂತೆ ತೋರುತ್ತದೆ. ಭಾವಗೀತೆಯ ಲಕ್ಷಣದಿಂದ ಕೂಡಿದ ಅನುಭಾವ ಗದ್ಯವೇ ವಚನ ಎಂದು ಹೇಳಿದರೆ ಅದರಂತೆ ಒಗಟು ಒಡಪು ಗಾದೆಗಳು ಭಾವಗೀತೆಯ ಲಕ್ಷಣದಿಂದ ಕೂಡಿದ ಗದ್ಯ ಮಾದರಿಗಳು ಎಂದು ಹೇಳಬಹುದಾಗಿದೆ.

## ಶಬ್ಧ ಮತ್ತು ಅರ್ಥ

ಒಗಟು ಶಬ್ಧದ ರೂಪನಿಷ್ಪತ್ತಿಯ ವಿಷಯದಲ್ಲೂ ಅದರ ಸಮಸ್ಯಾತ್ಮಕ ಗುಣವೇ ವಿದ್ವಾಂಸರಲ್ಲಿ ತಲೆದೋರಿದೆ. ಒಗಟು ದ್ರಾವಿಡ ಬಳುವಳಿಯದೊ ಸಂಸ್ಕೃತ ಇಲ್ಲವೇ ಪ್ರಾಕೃತದಿಂದ ಕನ್ನಡಕ್ಕೆ ಬಂದುದೋ; ಇಲ್ಲವೇ ಈ ವಿಶಿಷ್ಠ ಪದ ಅಚ್ಚಗನ್ನಡದೊ ಮುಂತಾದ ಹತ್ತು ಹಲವು ವಿಚಾರಗಳ ಸಂಕೀರ್ಣತೆಯಲ್ಲಿ ಆ ಸಮಸ್ಯೆಯನ್ನು ಸಮಸ್ಯೆಯಾಗಿಯೇ ಉಳಿದಿರುವುದರಿಂದ ಒಮ್ಮತಕ್ಕೆ ಬರುವುದು ಅಸಾದ್ಯವೆನಿಸಿದೆ. ಈ ಮದ್ಯ ಒಗಟು ಎಂದರೆ ಒಡಗತೆ ಎಂಬುದೂ ಒಂದು ದೊಡ್ಡ ಸಮಸ್ಯೆ.

ಒಗಟು ಅತ್ಯಂತ ಪ್ರಾಚೀನವಾದ ಜನಪ್ರೀಯ ಪ್ರಕಾರ ಅದಕ್ಕೆ ಸಂಸ್ಕೃತದಲ್ಲಿ ಸಂವಾದಿಯಾಗಿ ಬ್ರಹ್ಮೋದ್ಯ, ಪ್ರಹೇಲಿಕಾ ಇಲ್ಲವೇ ಪ್ರವ್ಹಲಿಕಾ ಪ್ರಶ್ನೆ ಕೂಟ ವಿವಾದ ಸಮಸ್ಯಾ ಗೂಢ ಹೃದಯಾಲಿಕಾ ಮುಂತಾದ ಪದಗಳಿವೆ. ಇವುಗಳೆಲ್ಲಾ ವೇದಗಳಲ್ಲಿ ಬಳಕೆಯಾದ ಬ್ರಹ್ಮೋಧ್ಯವೇ ಹೆಚ್ಚು ಪ್ರಾಚೀನವಾದುದು. ಯಜ್ಞಯಾಗಾದಿ ಸಂದರ್ಭಗಳಲ್ಲಿ ನಡೆದ ಧಾರ್ಮಿಕ ವಿಧಿ ವಿಷಯಗಳಿಗೆ ಸಂಬಂಧಪಟ್ಟ ಪ್ರಶ್ನೋತ್ತರಗಳಿಗೆ ಬ್ರಹ್ಮೋದಯ' ಎಂದು ಕರೆಯಲಾಗುತ್ತಿದೆ. ಅದಲ್ಲದೇ 'ಅಶ್ವಮೇಧ ಯಾಗ' ದಲ್ಲಿ ಕುದುರೆಯನ್ನು ಕಡಿಯುವ ಮುನ್ನ ಹೋತ್ರಿ ಮತ್ತು ಬ್ರಾಹ್ಮಣರು ಉಪಾಸನಾ ವಿಧಿಗಳ ಅಂಗವಾಗಿ ಏರ್ಪಡಿಸುತ್ತಿದ್ದ ಸಮಸ್ಯಪುರಾಣ ಕಾರ್ಯಕ್ರಮವನ್ನು ಬ್ರಹ್ಮೋಧ್ಯ ಎಂದು ಕರೆಯುತ್ತಿದ್ದರಂತೆ ಸಂಹಿತಾ ಬ್ರಾಹ್ಮಣ ಉಪನಿಷತ್ತುಗಳಲ್ಲಿ ಇಂಥ ಸ್ತೋತ್ರ ಪಾರಗಳಿರುವುದು ಗಮನಾರ್ಹ.

ಡಾ. ಬೆಟಗೇರಿ ಕೃಷ್ಣಶರ್ಮರು ಕನ್ನಡಬಲ್ಲಿ 'ಒಗಟು' ಪದ ಬಳಕೆಗೊಂಡಿದ್ದನ್ನು ಪರಿಶೀಲಿಸುವಾಗ ಕನ್ನಡದ 'ಓಗಂಟು' ಈ ಪದಗಳು ಪಾಕೃತದಿಂದಲೇ ಬಂದಿರಬಹುದೆಂದು ಊಹಿಸಿದ್ದಾರೆ. ಕನ್ನಡದಲ್ಲಿ ಒಗಟಿಗೆ ಒಡಗತೆ, ಒಡಚುವಕಥೆ ಒಡ್ಡಿದ ಕಥೆ ಮುಂತಾದ ಹೆಸರುಗಳಿಂದಲೂ ಕರೆಯುವುದುಂಟು. ತೆಲುಗಿನಲ್ಲ ಪೊಡಮು, ಕಥಲು, ವಿದಿಕಥಾ ಇತ್ಯಾದಿ ಈ ವಿಚಾರವಾಗಿ ರಾಗೌ ಅವರು "ಒಡಚುವ ಕಥೆಯೇ ಒಡಗಥೆ ಆಗುವದು ಎಷ್ಟು ಸುಲಭವೋ ಬೃಹತ್ಕಥಾದಿಂದ ಒಡಗಡೆ ಆಗುವದು ಅಷ್ಟೆ ಕಷ್ಟವೆನಿಸುತ್ತದೆ. ಇನ್ನು ಒಗಟು ಕಥೆ ಒಗಟಿನ ಒಂದು ಪ್ರಕಾರವೆಂದು ಈ ಮೊದಲೇ ಪರಿಶೀಲಿಸಿದೆ. ಜಾನಪದ ಎಂದರೆ ಜನಪದ ಸಾಹಿತ್ಯ. ಜನಪದ ಸಾಹಿತ್ಯವೆಂದರೆ ಕೇವಲ ಗೀತಸಾಹಿತ್ಯವೆಂದು ಹೇಗೆ ಭಾವಿಸಲ್ಪಟ್ಟಿತ್ತೊ ಹಾಗೆ ಕರ್ನಾಟಕದಲ್ಲಿ ಇಂದಿಗೂ ಕೂಡಾ ಅದೇ ಭಾವನೆ ದಟ್ಟವಾಗಿದೆ. ಉದಾ: ಶ್ರೀ ಸಿಂಪಿ ಲಿಂಗಣ್ಣನವರು ಜನಾಂಗದ ಜೀವಾಳ ಎಂಬ ತಮ್ಮ ಗ್ರಂಥವೊಂದರಲ್ಲಿ ಒಡಗಥೆಗಳ ಸ್ವಾರಸ್ಯ ಎಂಬ ಭಾಗದಲ್ಲಿ ಮೊದಲಿನಿಂದ ಕೊನೆಯವರೆಗೂ "ಒಗಟು" ಎಂದರೆ ಒಡಗತೆ ಎಂದೇ ಸಂಭೋದಿಸಿ ವಿವರಿಸುತ್ತಾ ಹೋಗುವುದನ್ನು ಗಮನಿಸಬಹುದು. ಅದು ಪ್ರಾಚೀನ ಕಾಲದಿಂದಲೂ ಕನ್ನಡದ ಮತ್ತು ಕನ್ನಡ ಕವಿಗಳ ಮೇಲೆ ಹಾಗೇಯೇ ಜನಪದರ ಮೇಲಾದ ಸಂಸ್ಕೃತ-ಪ್ರಾಕೃತಗಳ ದಟ್ಟವಾದ ಛಾಯೆಯೆಂಬುದು ಸ್ಪಷ್ಟ

ಒಗಟುಗಳು ಎಂದಾಕ್ಷಣ ಕೆಲವರಿಗಾದರು ಮೊದಲಿಗೆ ನೆನಪು ಬರುವುದು ಅವುಗಳ ಲೈಂಗಿಕಾಭಿವೃದ್ಧಿಯ ಉತ್ಸುಕತೆ, ಕಥೆ, ಹಾಡು, ಗಾದೆ, ಹೀಗೆ ಹಲವು ಅಭಿವ್ಯಕ್ತಿ ಪ್ರಕಾರಗಳನ್ನು ಒಳಗೊಂಡಿರುವ ಈ ಕಾಮ ಸಹಜವಾಗಿಯೇ ಒಗಟುಗಳಲ್ಲಿ ಅವತರಿಸಿರುವುದು ಜಾನಪದ ಜೀವನೋತ್ಸಾಹ, ಮುಕ್ತ ಮನಸ್ಸಿನ ಪ್ರತೀಕವಾಗಿದೆ. ಆದರೂ ಜಾನಪದದ ಇತರ ಪ್ರಕಾರಗಳಿಗೂ ಒಗಟುಗಳಲ್ಲಿನ ಲೈಂಗಿಕ ವಿವರಗಳಿಗೆ ಒಂದು ಮುಖ್ಯ ವ್ಯತ್ಯಾಸವಿದೆ. ಅದು ಒಗಟುಗಳ ಉದ್ದೇಶಕ್ಕೆ ಪೂರಕವಾಗಿದೆ. ಒಗಟುಗಳ ಉದ್ದೇಶವೇ ಎದುರಾಳಿಯ ದಾರಿ ತಪ್ಪಿಸಿ ಆತನನ್ನು ಸೋಲಿಸುವುದಾಗಿದೆ. ಒಗಟುಗಳ ಲಕ್ಷಣವೇ ಒಂದನ್ನು ಅಂತರ್ಯದಲ್ಲಿರಿಸಿಕೊಂಡು ಹೊರಗೆ ಇನ್ನೊಂದನ್ನು ಪ್ರಕಟಿಸುವುದಾಗಿದೆ. ಲೈಂಗಿಕ ವಗಟುಗಳಲ್ಲಿ ಎರಡು ಬಗೆ ೧. ಬಾಹ್ಯ ಲೈಂಗಿಕ ಒಗಟು ಹೇಳುವ ಮಾತಿನಲ್ಲೇ ಲೈಂಗಿಕ

ವಿವರಗಳಿದ್ದು, ಆಂತರ್ಯದಲ್ಲಿ ಸಭ್ಯ ಉತ್ತರವನ್ನು ನಿರೀಕ್ಷಿಸುವುದು ೨. ಅಂತರ್‌ಲೈಂಗಿಕ ಒಗಟು : ಹೇಳುವ ವಿವರಗಳು ಸಭ್ಯವಾಗಿದ್ದು ಆಂತರ್ಯದಲ್ಲಿ ಲೈಂಗಿಕ ಜಗತ್ತಿಗೆ (ಅಶ್ಲೀಲ) ಸಂಬಂಧಿಸಿದ ಉತ್ತರ ನಿರೀಕ್ಷಿಸುವುದು.

ಉದಾ: ನನ್ನ ವಟ್ಟೆಮ್ಯಾಲೆ ನಿನ್ನ ವಟ್ಟೆ

ನಿನ್ ತೂತಿಗ್ ನನ್ ಗೂಟ–ರಾಗಿಕಲ್ಲು

ಹೆಣ್ಣಿಗೆ ಎರಡು

ಗಂಡ್ಸಿಗೆ ಮೂರು – ವಿಭೂತಿಬೊಟ್ಟು

ಉತ್ತರ ನಿರೀಕ್ಷಿಸುವುದು ಒಗಟುಗಳಲ್ಲಿ ಮುಖ್ಯವಾಗಿದ್ದರೂ ಅಭಿವ್ಯಕ್ತಿ ಸ್ವತಃ ಪ್ರಶ್ನಾರ್ಥಕವಾಗಿರದೇ ಹೇಳಿಕೆ ರೀತಿಯಲ್ಲಿ ಇರುವುದು ಹೆಚ್ಚು ಇದಕ್ಕೊಂದು ಒಳ್ಳೆಯ ಉದಾ:

ಎಲೆ ತೆಗೆದು ವಾರಿಗಿಕ್ಕಿ ಊಟ ಮಾಡಪ್ಪ

ಉತ್ತರ : ಊಟ ಮಾಡುವಾಗ ಕರಿಬೇವಿನ ಎಲೆ ತೆಗೆದು ಪಕ್ಕಕ್ಕಿಡುವುದು.

ಒಂದೇ ಒಗಟಿನಲ್ಲಿ ಅನೇಕ ಪ್ರಶ್ನೆ – ಉತ್ತರಗಳು ಅಡಕವಾಗಿರುವುದು

ಅಂಗೈಯಗ್ಲ ಗದ್ದೆ, ಕಿರುಬೆಳ್ ಗಾತ್ರ ಬದುವು

ಬದಿಗೊಂದ್ ಹಸ : ಹಸಗದ್ದೆ ತುಳೀಬಾರ್‍ದು,

ಗದ್ದೆ ಮೇಯ್ಬಾರ್‍ದು : ಆ ಗದ್ದೇಗಳ ನೀರೂ ಕುಡಿಗೊಲ್ಲ

ಹಾಗೇ ಬದಿನಾಗೇನೆ ಹಸ ಮೇಯ್ಬೇಕು .. . . . . .?

ಇದಕ್ಕೆ ಉತ್ತರ ೧. ನಾಲಿಗೆ ೨. ತುಟಿ ೩. ಹಲ್ಲು ಹಾಗೂ ತಿನ್ನುವ ಕ್ರಿಯೆ ಈ ರೀತಿಯಾಗಿ ನಮ್ಮ ಜನಪದರು ಒಗಟುಗಳನ್ನು ಮನರಂಜನೆಗಾಗಿ ಜಾತ್ರೆಯ ಸಂದರ್ಭದಲ್ಲಿ ಒಳ್ಳೊಳ್ಳೆ ಅಡುಗೆ ಮಾಡಿ ಊಟ ಮಾಡಿಕೊಂಡು ಹೊರಗಡೆ ಕುಳಿತು ಬೀಗರೊಂದಿಗೆ , ಸಂಬಂಧಿಕರೊಂದಿಗೆ ಒಗಟಿನ ಮಾಲೆ ಬೀಳುತ್ತದೆ. ಒಬ್ಬರು ಒಂದು ಒಗಟು ಹಾಕಿದರೆ ಅವರ ಎದುರಾಳಿ ಇನ್ನೊಂದು ಒಗಟು ಹಾಕಿ ಅವರಿಂದ ಆ ಒಗಟಿನ ಉತ್ತರವನ್ನು ಕಂಡುಕೊಳ್ಳುವದು ಮತ್ತೆ ಇವರ ಒಗಟನ್ನು ಬಿಚ್ಚಿಕೊಳ್ಳಬೇಕಾದರೆ ಅವರು ಮತ್ತೊಂದು ಒಗಟು ಒಡ್ಡಬೇಕು.

ಕತ್ತಲು ಮನೆಯಲ್ಲಿ ಕರಿಯಮ್ಮ ಕೂತಾಳೆ . . .? ಹೆಂಚು

ಉದ್ದಾನ ಮರಕ್ಕೆ ಗುದ್ದಲಿ ಸಿಗಾಕಿದೆ . . . . ...? ಮೂಗುತಿ

ಹಂಚಿ ಹುಲ್ಲಾಗೆ ಕೆಂಚಣ್ಣ ಕುಂತವ್ನೆ . . . .. . ? ಹುತ್ತ

ಅಡ್ಡಗೋಡೆ ಮ್ಯಾಲೆ ದೊಡ್ಡಪ್ಪ ಕೂತವ್ನೆ . . .? ಚೇಳು

ಹುತ್ತುಕ್ ಮೂರು ಮುತ್ತು . . . ____.. . ? ಇಬ್ಬನಿ

ಇಬ್ಬನಿಗೊಬ್ಬಣ್ಣ . ________... . . .? ಸೂರ್ಯ

ಸುತ್ತ ಸುಣ್ಣದ ಗೋಡೆ ಎತ್ಲಾಗ ನೋಡಿದ್ರೆ ಬಾಗಲಿಲ್ಲ ? ಕೋಳಿ ಮೊಟ್ಟೆ

ಕಿರಿಕಿರಿ ಬಾಕ್ಲು ಕಿರಂಗಿ ಬಾಕ್ಲು ಹಾಕಕ ಬರ್‍ತೈತೆ ತೆಗೆಯಾಕ ಬರಕಿಲ್ಲ – ಸ್ಮಶಾನನದಲ್ಲಿ ಹೆಣ

ಬಂಗಾರದ ಬಟ್ಲ ಬಾರ್‍ಲು ಬಿದ್ದಿದೆ. – ತಾಳಿ

ಅಂಗಣ್ಣ ಮಂಗಣ್ಣ ಅಂಗಿ ಬಿಚ್ಚೆ ಅಂಗೆ ನುಂಗಣ್ಣ – ಬಾಳೆಹಣ್ಣು

ಕೆಕ್ಕರಿಕೆ ಕಾಯ್ಗೆ ಕೆರಕಳೊ ಅಣ್ಣ . . . . . . . __? – ಚಾಕು

ಹೀಗೆ ಹಾಡುಗಳ ರೂಪದಲ್ಲಿಯೂ ಸಹ ಒಗಟುಗಳನ್ನು ಹೇಳುತ್ತಾರೆ.

ಉದಾ:೧ ಕಲ್ಲರಳಿ ಹೂವಾಗಿ
ಎಲ್ಲರಿಗೂ ಬೇಕಾಗಿ
ಮಲ್ಲಿಕಾರ್ಜುನನ ಶಿಖರಕ್ಕೆ
ಬೆಳಕಾಗಿ ನಾನು ಯಾರು . . . . .? – ಸುಣ್ಣ

೨. ಅಂಗೈಯಷ್ಟು ಗದ್ದೆ
ಗದ್ದಿಗೆ ನೀರು
ನೀರಿಗೆ ಬೇರು ಬೇರಿಗೆ
ಬೆಂಕಿ ನಾನು ಯಾರು . . . ? – ದೀಪ

ಹಿಡಿದರೆ ಹಿಡಿ ತುಂಬಾ ಬಿಟ್ಟರೆ ಮನೆ ತುಂಬಾ – ದೀಪದ ಬೆಳಕು

ಉದ್ದಾನಾನೇ ಉಳಕು ಮೊಗದನೆ ಸುದ್ದಿ ತಗೊಂಬಾರೋ ಸೂಳೇ ಮಗನೇ– ನ್ಯೂಸ್ ಪೇಪರ್

ಒಂದು ಎತ್ತು ಒಂದೇ ಕಡೆ ಮೈ ತೊಳಿಸಿಕೊಳ್ಳುತ್ತದೆ. . . ರೊಟ್ಟಿ

ಹೀಗೆ ಮುಂದಿನ ಮಾತಿನಲ್ಲಿ ಉತ್ತರ ಇರುವುದರಿಂದಲೇ ಒಂದು ಉತ್ತರ ಪಡೆದ ಮೇಲೆಯೇ ಅದನ್ನೇ ಪ್ರಶ್ನೆಯನ್ನಾಗಿ ಪರಿವರ್ತಿಸಿ ಇನ್ನೊಂದು ಒಗಟು ಮಾಡುವುದು. ಮೇಲಿನ ಈ ಎರಡು ವಿಧಗಳಲ್ಲೂ ಮೊದಲ ಭಾಗವನ್ನು ಸರಿಯಾಗಿ ಒಡಿಸಿದರೆ ಮಾತ್ರ ಮುಂದಿನ ಒಗಟುಗಳು ಅರ್ಥವಾಗುವದು ಅಥವಾ ಒಗಟು ಕ್ರಿಯೆ ಮುಂದುವರೆಯುವುದು.

೧. ತಾಯಿ ಪಾತಾಳಕ್ಕೆ ತಂದೆ ಆಕಾರಕ್ಕೆ ಮಗಳು ಮದುವೆಗೆ ಮಗ ಸಂತಗೆ = ತೆಂಗಿನಮರ

## ೫. ನಂಬಿಕೆಗಳು

ಮಾನವ ಸಮಾಜದ ಅಸ್ತಿತ್ವಕ್ಕೆ ಕಾರಣವಾದ ನಂಬಿಕೆಗಳು ಒಂದು ಕಡೆ ನೆಲೆ ನಿಲ್ಲಬೇಕು. ಹೀಗೆ ನಂಬಿಕೆ ನೆಲೆನಿಂತಾಗಲೇ ಸಮಾಜ ಮೌಲ್ಯವೆಂದು ಒಪ್ಪುತ್ತದೆ. ತಾನು ನೆಲೆನಿಂತು ಬದುಕುವ ಕಾರಣಕ್ಕಾಗಿ ಮಾನವ ಸಮಾಜವನ್ನು ಕಟ್ಟಿಕೊಳ್ಳಬಯಸುತ್ತಾನೆ. ಅದಕ್ಕಾಗಿ ಒಂದು ಸ್ಥಳ ಅಥವಾ ಪ್ರದೇಶದಲ್ಲಿ ನೆಲೆ ನಿಲ್ಲುತ್ತಾನೆ. ಅಲ್ಲಿ ಅವನಿಗೆ ನಾನು, ನನ್ನದು, ನನ್ನ ಬಳಗ, ನನ್ನ ಜನರು, ಮತ್ತು ನನ್ನ ಸಮಾಜವೆಂಬ

ನಂಬಿಕೆ ಬರುತ್ತದೆ. ಹಾಗೆ ಹೊರಗಿನವರಿಂದ ಕೂಡ ಈ ನಂಬಿಕೆ ಒಂದು ರಕ್ಷಣೆ ಒದಗಿಸುತ್ತದೆ. ಅಂದರೆ ಅವನನ್ನು ನೆಲೆ ನಿಲ್ಲಿಸಿದ ನಂಬಿಕೆ ಅವನಿಗೊಂದು ರಕ್ಷಣೆ ಕೊಡುತ್ತದೆ. ಹೀಗೆ ಅವನು ಒಂದು ಕಡೆ ನೆಲೆನಿಲ್ಲಲು ಮತ್ತು ತನ್ನನ್ನು ರಕ್ಷಿಸಿಕೊಳ್ಳಲು ಬೇಕಾಗುವ ನೆಲೆ ನಿಲ್ಲುವ ನಂಬಿಕೆ ಆಚರಣೆಗಳನ್ನು ಸೃಸಿಕೊಳ್ಳುತ್ತಾನೆ. ಹೀಗೆ ಮಾನವನ ಬದುಕಿನ ಸ್ಥಾಪನೆ ನಂಬಿಕೆಲ್ಲಿದೆ. ನಂಬಿಕೆ ಮಾನವನ ಬದುಕಿನಲ್ಲಿ ಮೂಲದ್ರವ್ಯವಾಗಿದೆ.

ಮಾನವ ತನ್ನ ಉಳಿವಿಗಾಗಿ ಕೆಲವೊಂದು ನಂಬಿಕೆಗಳನ್ನು ತಂದಿದ್ದಾನೆ. ಜೀವನದ ಹಂತ ಹಂತಗಳಲ್ಲಿ ಈ ನಂಬಿಕೆಗಳು ಬಳಕೆಯಾಗುತ್ತಾ ಹೋಗುತ್ತವೆ. ವ್ಯಕ್ತಿಯ ಮನೋಭಾವ ಹೇಗಿರುತ್ತದೆಯೋ ಹಾಗೆಯೇ ನಂಬಿಕೆಗಳು ಜನತೆಯಲ್ಲಿ ಪ್ರಭಾವ ಬೀರಬಲ್ಲವು ಅಲ್ಲದೇ ನಂಬಿಕೆಗಳು ಜನತೆಯ ಜೀವನವನ್ನು ನೇರವಾಗಿಚಿತ್ರಿಸುತ್ತವೆ. ನಂಬಿಕೆಯು ನೆಚ್ಚಿಕೆಯ ಒಂದು ಮಾನಸಿಕ ಸ್ಥಿತಿ ಇದು ಸಂಪ್ರದಾಯಕವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆಯಾಗಿದ್ದು, ಸಾಮಾನ್ಯವಾಗಿ ಅದು ಕಾರಣ ಮತ್ತು ಪರಿಣಾಮದ ಸಂಬಂಧವನ್ನು ಹಾಗೂ ಭೂತ, ವರ್ತಮಾನದ ಮತ್ತು ಭವಿಷ್ಯತ್ತಿನ ಸಂಗತಿಗಳನ್ನು ಒಳಗೊಂಡಿರುತ್ತದೆ. ಮನಸ್ಸು ಅನುಭವಗಳ ಮೂಲಕ ಬೆಳೆಯುತ್ತಾ ಹಲವಾರು ನಂಬಿಕೆಗಳನ್ನು ಸಂಪಾದಿಸಿಕೊಳ್ಳುತ್ತಾ ಅವುಗಳಿಗೆ ಲೌಕಿಕವಾಗಿ ಅಲೌಕಿಕವಾಗಿ ಒಂದು ವ್ಯವಸ್ಥಿತ ರೂಪ ಕೊಡುತ್ತಾ ಹೋಗುತ್ತದೆ. ಕೆಲವು ಸಾರಿ ವ್ಯಕ್ತಿಯ ಬದುಕಿನಲ್ಲಿ ಶ್ರದ್ಧೆಯನ್ನುಂಟು ಮಾಡುತ್ತವೆ. ನಂಬಿಕೆಗಳನ್ನು ನೋಡಿದಾಗ ಒಂದು ರೀತಿಯಲ್ಲಿ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಬಳಸುವ ವಿಧಾನಗಳಿರುತ್ತವೆ. ಪ್ರತಿಯೊಂದು ಕೆಲಸಕಾರ್ಯ, ಆಲೋಚನೆ, ಸಂಪ್ರದಾಯ, ರೂಢಿ ಜೀವನ ಕ್ರಮಗಳೆಲ್ಲವೂ ನಂಬಿಕೆಗಳಿಂದ ಆಧಾರ ಪಡೆದಿವೆ.

## ನಂಬಿಕೆ ನಿರೂಪಣೆ

ನಂಬಿಕೆ ಎನ್ನುವ ಪದವನ್ನು ವಿದ್ವಾಂಸರು ವಿವರಿಸುವಾಗ ಕೆಲವು ವಿವರಣೆಗಳು ಮನುಷ್ಯನ ಮಾನಸಿಕ ಪರಿಣಾಮಗಳನ್ನು ಗುರುತಿಸಿದರೆ ಮತ್ತೇ ಕೆಲವು ಭೌದ್ಧಿಕತೆಗೆ ಒತ್ತು ಕೊಟ್ಟಿವೆ. ಇನ್ನು ಕೆಲವು ವಿವರಣೆಗಳು ಮನುಷ್ಯನ ಗ್ರಹಿಕೆಯ ಶಕ್ತಿಗೆ ಒತ್ತು ಕೊಟ್ಟಿವೆ. ಬೇರೆ, ಬೇರೆ ರೀತಿಯಲ್ಲಿ ನಂಬಿಕೆಯನ್ನು ವಿವರಿಸಿದ್ದಾರೆ. ಈ ಕೆಳಗಿನಂತೆ ನೋಡಬಹುದು.

**ಹ್ಯೂಮ್**: ಮನುಷ್ಯನಿಗೆ ವಿಚಾರ ಮಾಡುವ ಶಕ್ತಿರುವುದರಿಂದ ಅವನು ಹೊಸ ಹೊಸ ಕಲ್ಪನೆಗಳನ್ನು ಕಟ್ಟುತ್ತಾನೆ ಭಾವನೆಗಳನ್ನು ಹೊಸೆಯುತ್ತಾನೆ ಅವು ಆತನ ಭಾಷೆ ಅಭಿವ್ಯಕ್ತಿಗೊಂಡಾಗ ಸಹಜವಾಗಿ ಹೊರಬೀಳುತ್ತವೆ. ಇಂಥ ವಿಶಿಷ್ಟ ರೀತಿಯ ಭಾವನೆಗಳೇ ಜನಪದ ನಂಬಿಕೆಗಳು.

## ರಾಗೌ ಮತ್ತು ವಸಂತಕುಮಾರ ಎಂ.ಸಿ

ನಂಬಿಕೆ ಒಂದು ಮಾನಸಿಕ ಸ್ಥಿತಿ, ಪರಂಪರಾಗತವಾಗಿ ಸ್ವೀಕೃತವಾದ ಒಂದು ಭಾವರೂಪ ಪುನರಾವರ್ತಿತಿ ಹಾಗೂ ಸಂಪ್ರದಾಯಿಕ ಅಭಿಪ್ರಾಯೋಕ್ತಿ , ವಸ್ತುಸ್ಥಿತಿಯೊಡನೆ ಅವೈಜ್ಞಾನಿಕವಾದ ಸಂಬಂಧವುಳ್ಳ ಹೇಳಿಕೆ ಇದರಲ್ಲಿ ಮಾತು ಒಂದು ಭಾಗ, ಕ್ರೀಯೇ ಒಂದು ಭಾಗ ಇವುಗಳು ಅವರ ವಿಚಿತ್ರಮಯ ಜೀವನಕ್ಕೆ ಬರೆದಿಟ್ಟ ಸಚಿತ್ರ ಶಾಸನಗಳಾಗಿವೆ.

## ಕನ್ನಡ ವಿಶ್ವಕೋಶದ ಪ್ರಕಾರ

ಸಾಮಾನ್ಯವಾಗಿ ಯಾವುದಾದರೂ ಪ್ರಮೆಯ ಹೇಳಿಕೆ ಅಥವಾ ಸತ್ಯಾಂಶವನ್ನು ನಿಜವೆಂದು ಭಾವಿಸಿ, ಸ್ವೀಕರಿಸುವುದು ನಂಬಿಕೆ. ಇದು ವ್ಯಕ್ತಿ ಅಥವಾ ತತ್ವಶಾಸ್ತ್ರಕ್ಕೂ ಅನ್ವಯಿಸುತ್ತದೆ.

According to standerd dictionary of Folklore Mythology and Legend voll: Traditionally accepted concept often of a cause and effect Relationship part present of future accepted as a result of repeated and Collective Observation of finaly of faith



ಈ ಮೇಲಿನ ವಿವರಣೆಗಳನ್ನು ಗಮನಿಸಿದಾಗ ಮೊದಲನೆಯದಾಗಿ ನಂಬಿಕೆಯು ಮಾನಸಿಕ ಒಪ್ಪಿಗೆಯಾಗಿದೆ. ಅದನ್ನು ಪರಂಪರಾನುಗತವಾಗಿ ನಂಬಿ ಅದರಂತೆ ನಡೆದುಕೊಂಡು ಬಂದಿರುವ ಭಾವ ರೂಪ ಇದು ಸೂಚನೆ, ಆದೇಶ, ನಿರ್ದೇಶನ, ಆಗ್ರಹ, ಮತ್ತು ನಿಷೇಧ ರೂಪದ ಒಂದು ಹೇಳಿಕೆ ನಂಬಿಕೆಗಳಿಂದ ಕ್ರೀಯೆಗಿಳಿದ ಜನರು ಒಬ್ಬರಿಂದ ಇನ್ನೊಬ್ಬರಲ್ಲಿ ಬಾಯಿಂದ ಬಾಯಿಗೆ, ಕಿವಿಂದ ಕಿವಿಗೆ ಕೇಳಿ ನಡೆಯಲ್ಲಿ ತಂದರು. ಅದನ್ನು ಮುಂದಿನವರು ಮತ್ತೊಬ್ಬರು ಅವುಗಳನ್ನು ಕಣ್ಣಾರೆ ಕಂಡು ಸುಖದ ಆಸೆ ತಾಳಿಯೇ ಮನಸ್ಸಿನ ಸಮಾಧಾನಕ್ಕೆ ಅನುಸರಿಸಿದರು.



ಎರಡನೆಯದಾಗಿ ನಂಬಿಕೆಯು ಒಂದು ರೀತಿಯಲ್ಲಿ ಸೂಚನೆ ನಿಯಮ ನಿಷೇದ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದ ಒಂದು ಹೇಳಿಕೆಯಾಗಿದೆ. ಈ ಹೇಳಿಕೆಯನ್ನು ಜನರು ಅನುಸರಿಸುತ್ತಾರೆ. ಹಾಗೆಯೇ ನಡೆದುಕೊಳ್ಳುತ್ತಾರೆ. ಅದರ ಈ ನಡವಳಿಕೆಯು ಪ್ರಜ್ಞಾಪೂರ್ವಕವಾಗಿರಬಹುದು. ಅಥವಾ ಅಪ್ರಜ್ಞಾಪೂರ್ವಕವಾಗಿರಬಹುದು. ಅದು ಧೋರಣೆ ವಿಶ್ವಾಸಕ್ಕೆ ಸಂಬಂಧಿಸಿದ್ದು. ಮೂರನೆಯದಾಗಿ ನಂಬಿಕೆಯು ನಿಜವಾಗಿರಬಹುದು ಅಥವಾ ಸುಳ್ಳಾಗಿರಬಹುದು. ಇದು ಮನಸ್ಸಿನ ಭಾವನೆಯಾಗಿದೆ. ನಂಬಿಕೆ ಜ್ಞಾನಕಿಂತ ಭಿನ್ನವಾಗಿದೆ. ಇದನ್ನು ಮಾನವ ಜೀವನದ ಸರ್ವಕ್ಷೇತ್ರಗಳಲ್ಲಿ ಕಾಣಬಹುದು. ಇದು ಒಂದು ರೀತಿಯ ಆತ್ಮ ವಿಶ್ಲೇಷಣೆ ಬುದ್ಧಿಪೂರ್ವಕವಾದ ಕ್ರೀಯೆಯಾಗಿದೆ. ವ್ಯಕ್ತಿಯ ಅನುಭವಗಳ ವಾಸ್ತವಿಕತೆ ಮತ್ತು ಮೌಲ್ಯಗಳ ಇಲ್ಲವೇ ಧ್ಯೇಹ ಧೋರಣೆಗಳ ಒಂದು ಮಾನಸಿಕ ಸ್ಥಿತಿ ಎಂದೂ ಒಂದು ಹೇಳಿಕೆ ಸತ್ಯಾಂಶವಾಗಿದೆ.

ಉದಾ: ಭೈರಾಪುರದಿಂದ ಎರಡು ಕಿ. ಮೀ. ದೂರದಲ್ಲಿರುವ ಗುಡದಳ್ಳಿ ಗ್ರಾಮದ ಕುರೇಶಪ್ಪನವರ ವಂಶಸ್ಥರಲ್ಲಿ ಇಂದಿಗೂ ಮೊದಲ ಹುಟ್ಟುವ ಗಂಡು ಮಗುವಿಗೆ 'ಮರಿಸ್ವಾಮಿ' ಎಂದು ನಾಮಕರಣ ಮಾಡುತ್ತಾರೆ. ಏಕೆಂದರೆ ಅದಕ್ಕೆ ಒಂದು ದಂತಕಥೆ ಇದೆ. ಈ ವಂಶದ ಹಿರಿಯನಾದ ಕುರೇಶಪ್ಪ ಮರಿಸ್ವಾಮಿ ದೇವರಾಗಿ ಬಿಟ್ಟಂತಹ ಗೂಳಿ (ಹೋರಿ) ಯನ್ನು ಖರೀದಿಸಿಕೊಂಡು ತಂದು ಮನೆಯಲ್ಲಿ ಸಾಕತೊಡಗಿದನಂತೆ, ಒಂದು ದಿನ ಗೂಳಿಯನ್ನು ಕಟ್ಟಿಹಾಕಿದ ಪಕ್ಕದಲ್ಲಿ ಕುರೇಶಪ್ಪನ ಮಗ ಅಜ್ಜಪ್ಪ ಚಿಕ್ಕವನು ಅದರ ಕಾಲಡಿಗೆ ಉರುಳಿಕೊಂಡು ಹೋಗಿದ್ದನಂತೆ ಆಗ ಗೂಳಿ ರಾತ್ರಿವಿಡೀ ಮಲಗದೇ ಒದ್ದಾಡದೇ ನಿಂತ ಜಾಗದಲ್ಲೇ ನಿಂತುಕೊಂಡಿತಂತೆ ಇದನ್ನು ನೋಡಿದ ಕುರೇಶಪ್ಪ ಅಂದಿನಿಂದ ಆ ದೇವರಿಗೆ ನಡೆದುಕೊಳ್ಳತೊಡಗಿದರಂತೆ ಆಗಿನಿಂದ ವಂಶಸ್ಥರಲ್ಲಿ ಯಾರಿಗೆ ಮಕ್ಕಳಾದರೂ (ಗಂಡು) ಮೊದಲಿಗೆ ಆ ದೇವರ ಹೆಸರನ್ನು (ಮರಿಸ್ವಾಮಿ) ಕರೆಯುತ್ತಾರೆ. ಅದು ಈಗಲೂ ಮುಂದುವರೆಯುತ್ತಿದೆ.

ನನ್ನ ಮಗ ಅಥವಾ ಮಗಳು ಎಸ್.ಎಸ್.ಎಲ್.ಸಿ.ಯಲ್ಲಿ ಪಥಮ ಧರ್ಜೆಯಲ್ಲಿ ತೇರ್ಗಡೆಯಾದರೆ ಮರಿಸ್ವಾಮಿಗೆ ಒಂದು ನಾಗರ ಎಡಯನ್ನು ಮಾಡಿಸಿ ತಂದು ಅರ್ಪಿಸುತ್ತೇನೆ ಎಂದು ಹರಕೆ ಹೋರುವುದು. ಮಗನ ಫಲಿತಾಂಶ ಬಂದ ಕೂಡಲೇ ಜಾತ್ರೆ ಸಮಯದಲ್ಲಿ ನಾಗರ ಎಡೆಯನ್ನು ಮಾಡಿಸಿಕೊಡುವದು. ಹಾಗೂ ಚಿಕ್ಕ ಮಕ್ಕಳಿಗೆ ಜ್ವರ ಬಂದು ಚಿಂತಾಜನಕವಾದಾಗ ಅಂತಹ ಸಂದರ್ಭದಲ್ಲಿ ಆ ಮಗುವನ್ನು ಮರಿಸ್ವಾಮಿ ದೇವಸ್ಥಾನದ ಹತ್ತಿರ ಎತ್ತಿಕೊಂಡು ಬಂದು ಪೂಜೆ ಮಾಡಿಸಿ ಗುಡಿಯನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿಸಿ ನಂತರ ಮಗು ಹುಷಾರಾದರೆ ನಿನಗೆ ಬೆಳ್ಳಿ ಛತ್ರಿ ಮಾಡಿ ಸಿಕೊಡುತ್ತೇನೆ ಎಂದು ಮುಡುಪು ಕಟ್ಟಿಕೊಂಡು ಹೋಗುವದು, ಆ ದೇವರು ನನ್ನ ಮಗನನ್ನ ಉಳಿಸಿ ಹಾಲು ಕುಡಿಯುವಾಂಗೆ ಮಾಡಿದ ಎಂಬ ನಂಬಿಕೆ. ಮಗನ ವಿಧ್ಯಭ್ಯಾಸ ದೂರದ ಊರಿನಲ್ಲಿ (ಬೆಂಗಳೂರು, ಮೈಸೂರು) ಮಾಡಿಸುವಂತಹ ಸಂದರ್ಭದಲ್ಲಿ ಮಗುವನ್ನು ಕಳುಹಿಸಿಕೊಡುವಾಗ ದೇವಸ್ಥಾನಕ್ಕೆ ಹೋಗಿ ನಮಸ್ಕಾರ ಮಾಡಿಸಿ ಅರ್ಚಕರಿಂದ ದೇವರ ಭಂಡಾರವನ್ನು ಒಂದು ಪೇಪರನಲ್ಲಿಟ್ಟು ಅದನ್ನು ಬಿಳಿ ಬಟ್ಟೆಯಲ್ಲಿ ಕಟ್ಟಿ ವಿದ್ಯಭ್ಯಾಸಕ್ಕೆ ಹೊರಟ ಮಗನ ತೋಳಿನಲ್ಲಿ ಅಥವಾ ಸೊಂಟಕ್ಕೆ ಕಟ್ಟುವದು ಇದರ ಉದ್ದೇಶ ಪ್ರಯಾಣ ಮಾಡುವಾಗ ಅಪಘಾತಗಳು ಸಂಭವಿಸುವ ಸಂದರ್ಭದಲ್ಲಿ ನನ್ನ ಮಗನಿಗೆ ಏನೂ ಆಗಬಾರದೆಂಬ ನಂಬಿಕೆ.

ವ್ಯಾವಸಾಯದಲ್ಲಿಯೂ ಸಹ ಅಷ್ಟೇ ತಮ್ಮ ಜಮೀನಿನಲ್ಲಿ ಕೊಳವೆ ಬಾವಿ ಹಾಕಿಸುವಾಗ ಮೊದಲಿಗೆ ಎಲ್ಲಿ? ಯಾವಾಗ? ಯಾವ ಜಾಗದಲ್ಲಿ ಬೋರ್ ಹಾಕಿಸಬೇಕು ಮತ್ತು ಎಷ್ಟು ಪ್ರಮಾಣದಲ್ಲಿ ನೀರು ಬೀಳಬಹುದೆಂಬುದನ್ನು ದೇವರ ಬಳಿಗೆ ಬಂದು ಪೂಜೆ ಮಾಡಿಸಿ ದೇವರಿಂಧ ಹೂವನ್ನು ಕೇಳುವದು. ಅಂದರೆ ದೇವರ ಪೂಜೆ ಸಂದರ್ಭದಲ್ಲಿ ಮೂರ್ತಿಗೆ ಹೂವುಗಳನ್ನು ಮುಡಿಸಿ ಪೂಜಿಸಿರುತ್ತಾರೆ. ಆ ಮೂರ್ತಿಯಿಂದ ಮುಡಿಸಿದ ಹೂವು ಬಲಗಡೆ ಬಿದ್ದರೆ ನೀರು ಬೀಳಯತ್ತದೆ. (ಶುಭ ಸೂಚನೆ) ಎಡಗಡೆ ಬಿದ್ದರೆ (ಅಪಶಕುನ) ಎಂಬ ನಂಬಿಕೆ .

ಈ ಮೇಲಿನ ನಂಬಿಕೆ ಇಂದಿಗೂ ಆಚರಣೆಯಲ್ಲಿರುವುದನ್ನು ನಾವು ನೋಡಬಹುದಾಗಿದೆ. ಇದಕ್ಕೆ ಸಾಕ್ಷಿಯಾಗಿ ಭೈರಾಪುರದ ಮಾರಕಪ್ಲೆ (ಓಬಳಾಪುರ) ಬಜ್ಜಣ್ಣ ದೇವರ ಅನುಗ್ರಹದ ಮೇರೆಗೆ ತಮ್ಮ

ಜಮೀನಿನಲ್ಲಿ ಬಜ್ಜಣ್ಣ ಎಂಬುವವರು ಕೊಳವೆ ಬಾವಿ ಹಾಕಿಸಿದ್ದಾರೆ. ಅಂದುಕೊಂಡಂತೆ ನೀರು ಬಿದ್ದಿದೆ. ಅದಕೋಸ್ಕರ ಬಜ್ಜಣ್ಣ ೧ ಕೆ.ಜಿ. ಬೆಳ್ಳಿಯ ದೇವರ ಮುಖವನ್ನು ಮಾಡಿಸಿದ್ದಾರೆ. ಅದರಂತೆ ಇನ್ನೂ ಹಲವಾರು ಜನ ಇದೇ ರೀತಿ ಹರಕೆಗಳನ್ನು ತೀರಿಸಿದ್ದಾರೆ. ಕೇವಲ ಭೈರಾಪುರದ ಗ್ರಾಮದವರಲ್ಲದೇ ಅಕ್ಕಪಕ್ಕ ಊರಿನವರು ಕೂಡಾ ಇಂತಹ ನಂಬಿಕೆಗಳನ್ನು ಅಳವಡಿಸಿಕೊಂಡು ಬಂದಿದ್ದಾರೆ. ಈ ಭೈರಾಪುರದ ಮರಿಸ್ವಾಮಿ ಜಾತ್ರೆಯ ವಿಶೇಷವೆನೆಂದರೆ 'ಪಾನಕಗಾಡಿ ' ಹೂಡುವದು ಅಂದರೆ ಮನೆಯಲ್ಲಿ ಯಾರಿಗಾದರೂ ಒಳ್ಳೆಯ ಶುಭ ಕಾರ್ಯ ಜರುಗಿದರೆ ಅಂಥವರು ವರ್ಷಕ್ಕೊಮ್ಮೆ ಪಾನಕಗಾಡಿ ಹೂಡುತ್ತಾರೆ. ಅಂದರೆ ಮಕ್ಕಳು ಅನಾರೋಗ್ಯದಿಂದ ಬಳಲುತ್ತಿದ್ದರೆ ಅಂಥವರು ದೇವರಿಗೆ ನಂಬಿಕೆ ಮೊರೆ ಹೋಗುವದು ಮಕ್ಕಳು ಅನಾರೋಗ್ಯದಿಂದ ಚೇತರಿಸಿಕೊಂಡರೆ ಐದು ಕೆ.ಜಿ. ಹತ್ತು ಕೆ.ಜಿ. ಬೆಲ್ಲದ ಪಾನಕ ಗಾಡಿ ಹೂಡಿಸುತ್ತೇನೆ ಎಂದು ಹರಕೆ ಹೊತ್ತುಕೊಂಡು ಜಾತ್ರೆಯ ಸಂದರ್ಭದಲ್ಲಿ ಈ ಪಾನಕಗಾಡಿಯನ್ನು ಹೂಡುತ್ತಾರೆ.

ಈ ಪಾನಕಗಾಡಿ ಹೂಡುವದು ಕೇವಲ ಒಂದು ಜಾತಿ ಒಂದು ಊರಿನವರಲ್ಲ. ಬೇರೆ ಬೇರೆ ಊರಿನ ಬೇರೆ ಬೇರೆ ಜಾತಿಯ ಜನರು ಆಯಾ ಊರಿನಿಂದ ಪಾನಕಗಾಡಿ ಹೂಡಿಕೊಂಡು ಬಹಳ ವಿಜೃಂಭಣೆಯಿಂದ ತಮಟೆ, ವಾದ್ಯಗಳೊಂದಿಗೆ ಭೈರಾಪುದ ಮರಿಸ್ವಾಮಿ ಮಠಕ್ಕೆ ಬಂದು ಮೂರು ಸಾರಿ ಪ್ರಧಕ್ಷಿಣೆ ಹಾಕಿ ಪೂಜೆ ಮಾಡಿಸಿಕೊಂಡು ಆ ಪಾನಕವನ್ನು ಪ್ರಸಾದವೆಂದು ಬಂದ ಭಕ್ತರಿಗೆಲ್ಲರಿಗೂ ಕೊಡುವರು. ಈ ಪಾನಕಗಾಡಿಯನ್ನು ಮಾದಿಗರು ಮುಟ್ಟುವುದಿಲ್ಲ. ಮತ್ತು ಪಾನಕಗಾಡಿಯನ್ನು ಹೂಡುವಂತಿಲ್ಲ. ಇವರು ಹರಕೆ ಹೊತ್ತರೂ ಸಹ ಬೇರೆ ಜಾತಿಯವರ ಕೈಗೆ ಬೆಲ್ಲವನ್ನು ಕೊಟ್ಟು ಪಾನಕಗಾಡಿ ಹೂಡಿಸುತ್ತಾರೆ. ಮಾದಿಗರು, ಹೊಲೆಯರು, ಆ ಪಾನಕಗಾಡಿ ದೇವರ ಸನ್ನಿಧಿಗೆ ಹೋಗಿ ಬಂದಾಗ ಅದರ ಹತ್ತಿರಕ್ಕೆ ಹೋಗುತ್ತಾರೆ. ಅಲ್ಲಿಯವರೆಗೆ ಅಲ್ಲಿಗೆ ಸುಳಿಯುವದೇ ಇಲ್ಲ ಈ ಪಾನಕಗಾಡಿಯನ್ನು ಗೊಲ್ಲ ಜನಾಂಗದವರು ಹೊಡೆದುಕೊಂಡು ಹೋಗಿ ಪ್ರದಕ್ಷಿಣೆ ಮಾಡಿದ ನಂತರ ಮಾದಿಗರು ಅದರ ಹತ್ತಿರಕ್ಕೆ ಹೋಗುವದು. ಇವತ್ತಿಗೂ ಕಾಣಬಹುದು.

ಈ ಭೈರಾಪುರದ ಮರಿಸ್ವಾಮಿ ಜಾತ್ರೆಯಲ್ಲಿ ವಿಶೇಷವಾದ ನಂಬಿಕೆ ಎಂದರೆ ಈ ಪಾನಕಗಾಡಿ ಹೂಡುವದು ಈ ಪಾನಕಗಾಡಿಯ ಛಾಯ ಚಿತ್ರ ವನ್ನು ಛಾಯಚಿತ್ರಗಳ ಪುಟದಲ್ಲಿ ನೋಡಬಹುದು.ಇದಲ್ಲದೇ ಈ ನಮ್ಮ ಜನಪದರು ತಮಗೆ ಈ ದೇವರಿಂದ ಒಳ್ಳೆಯದಾಗಿದೆ ಅಥವಾ ಆಗಿತ್ತು ಎಂದಾದರೆ ಆ ದೇವರ ಹೆಸರಿನಲ್ಲಿ ಒಂದು ಗೂಳಿಯನ್ನು ಬಿಡುತ್ತಾರೆ. ಆ ಗೂಳಿ ಇವತ್ತಿಗೂ ಇದೆ. ಅದಕ್ಕೆ ಮರಿಸ್ವಾಮಿಮಠದ ಮುದ್ರೆಯನ್ನು ಹಾಕುತ್ತಾರೆ. ಅದು ಯಾರ ಜಮೀನಿನಲ್ಲಿಯಾದರೂ ಹಾಳುಮಾಡಿದರೆ ಅದನ್ನು ಹೊಡೆಯುವುದಿಲ್ಲ ಒಂದು ರೀತಿಯಲ್ಲಿ ಹೇಳುವುದಾದರೆ ಅದು ಏನೇ ಮಾಡಿದರೂ ಅದಕ್ಕೆ ಯಾವುದೇ ರೀತಿಯಿಂದ ತೊಂದರೆ ಕೊಡುವುದಿಲ್ಲ. ಹಾಗಾಗಿ ಆ ಗೂಳಿ ದಷ್ಟಪುಷ್ಟವಾಗಿ ಬೆಳೆಯುತ್ತದೆ. ಈ ಗೂಳಿ ಮನೆಯ ಬಾಗಿಲಿಗೆ ಬಂದರೆ ಅದಕ್ಕೆ ಎಣ್ಣೆ , ಹೂವು ಹಾಗೂ ಊದುಬತ್ತಿಯನ್ನು ಹಚ್ಚಿ ಪೂಜೆ ಮಾಡಿ ಅದಕ್ಕೆ ಎಡೆಯ ರೀತಿಯಲ್ಲಿ ಧವಸ ಧಾನ್ಯಗಳನ್ನು ಇಡುತ್ತಾರೆ. ಈ

ರೀತಿಯಾಗಿ ಜನರು ಆ ದೇವರನ್ನು ತಮ್ಮ ಮನೆದೇವರಾಗಿ ಪೂಜಿಸುತ್ತಾರೆ. ಮತ್ತೊಂದು ಮುಖ್ಯವಾದ ನಂಬಿಕೆ ಎಂದರೆ ದೇವರಿಗೆ ಎಡೆ ಮಾಡುತ್ತಾರೆ. ಅಂದು ದೇವರಿಗೆ ಎಡೆಯನ್ನು ಒಪ್ಪಿಸುವತನಕ ಯಾರು ಅನ್ನವನ್ನು ತಿನ್ನಬಾರದು ಮತ್ತು ದೇವರಿಗೆ ಮೊಸರು, ಹಾಲು ತೆಗೆದರೆ ಅದನ್ನು ದೇವರಿಗೆ ಒಪ್ಪಿಸುವತನಕ ಯಾರು ಕುಡಿಯಬಾರದು ಒಳ್ಳೆಯದಾಗುವುದಿಲ್ಲ ಎಂದು ಜನಪದರಲ್ಲಿ ನಂಬಿಕೆ ಇದೆ. ಹೊಲದಲ್ಲಿ ಏನಾದರೂ ಬೆಳೆ ಇದ್ದಾಗ ಅದಕ್ಕೆ ಬೆಂಕಿರೋಗ, ಹಿಡಿಸುರೋಗ ಇಂತಹ ಅನೇಕ ರೋಗಗಳು ಬಂದಾಗ ದೇವರ ತೀರ್ಥ ಎಂದು ದೇವರ ಮೈಮೇಲಿನ ಬಂಡಾರವನ್ನು ಜೊತೆಗೆ ಬೇವಿನಸೊಪ್ಪು ಕಲಕಿ ನೀರಿನಲ್ಲಿ ಹಾಕಿ ತೀರ್ಥ ಎಂದು ತಂದು ಚರಗ ಚಲ್ಲುವ ರೀತಿಯಲ್ಲಿ ಬೆಳೆಯ ಮೇಲೆ ಚಲ್ಲುವುದು ಇದರಿಂದ ಬೆಳೆಗೆ ಬಂದಂತಹ ರೋಗ ರುಜನಿಗಳು ನಿವಾರಣೆಯಾಗಿ ಗುಣಮುಖವಾಗುತ್ತವೆ. ಎಂದು ಜನಪದರಲ್ಲಿ ನಂಬಿಕೆಯಾಗಿದೆ.

ಗುಡ್ಡದಹಳ್ಳಿ ಗ್ರಾಮದ ಮಾದಿಗ ಸಮುದಾದಯವರು ಮೊಟ್ಟಮೊದಲಿಗೆ ಹುಟ್ಟಿದ ಮಗುವಿಗೆ ಮರಿಸ್ವಾಮಿ ಎಂಬ ನಾಮಕರಣ ಮಾಡುತ್ತಾರ. ಆ ಮಕ್ಕಳನ್ನು ಹೆತ್ತ ತಾಯಂದಿರು ಸುಮಾರು ಮೂರರಿಂದ ಆರು ತಿಂಗಳವರೆಗೆ ಮಾಂಸವನ್ನು ಊಟಮಾಡುವಂತಿಲ್ಲ ವೇಳೆ ಮಾಡಿದರೆ ಮಗುವಿಗೆ ಏನಾದರೂ ದೇವರ ಶಾಪ ತಗಲಬಹುದೆಂಬ ನಂಬಿಕೆ ಇಂದಿಗೂ ಇದೆ. ಒಂದು ವೇಳೆ ತಿನ್ನುವುದಾದರೆ ಮೊದಲಿಗೆ ದೇವರ ಗುಡಿಗೆ ಹೋಗಿ ತೀರ್ಥದ ನೀರನ್ನು ಹಾಕಿಸಿಕೊಂಡು ಬಂದು ನಂತರ ತಿನ್ನಬಹುದು. ಈ ತರಹದ ನಂಬಿಕೆ ನಮ್ಮ ಜನಪದರಲಿದೆ. ಮಗುವಿನ ಜವಳ ಕಾರ್ಯವು ಕುಡಾ ಈ ದೇವಸ್ಥಾನದಲ್ಲಿ ಅಂದರೆ ಆ ಮಗುವಿಗೆ ಜವಳಿ ತೆಗೆಯುವವರೆಗೂ ಮಾಂಸವನ್ನು ಊಟ ಮಾಡುವಂತಿಲ್ಲ. ಹಾಗೆಯೇ ಬೇರೆ ಕಡೆ ಹೋಗಿ ಕೂದಲು ತೆಗೆಸುವಂತಿಲ್ಲ. ಏಕೆಂದರೆ ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆಯ ಜನಪದರಲ್ಲಿ ಬೇರೂರಿಬಿಟ್ಟಿದೆ.

ಈ ರೀತಿಯಾಗಿ ನಮ್ಮ ಜನಪದರು ಒಂದಲ್ಲ ಒಂದು ರೀತಿಯ ನಂಬಿಕೆಗಳನ್ನು ಹೊತ್ತುಕೊಂಡು ಪರಂಪರಾಗತವಾಗಿ ಮುಂದುವರೆಸಿಕೊಂಡು ಬಂದಿದ್ದಾರೆ. ಈ ನಂಬಿಕೆಗಳು ಜೀವನಕ್ಕೆ ಬಹಳಷ್ಟು ಹತ್ತಿರವಾಗಿವೆ. ಇವು ಸತ್ಯ ಕೂಡಾ ಆಗಿವೆ. ಮಾನವನ ಬದುಕಿಗೂ ಹಾಗೂ ಈ ನಂಬಿಕೆಗಳಿಗೂ ಅವಿನಾಭಾವ ಸಂಬಂಧವುಂಟು. ಈ ನಂಬಿಕೆಗಳು ಕೇವಲ ಮಿಥ್ಯವಾಗದೇ ಅವು ನಿಜವಾಗಿವೆ. ನಂಬಿಕೆಗಳನ್ನು ನಮ್ಮ ಜನಪದರು ಜೀವನದುದ್ದಕ್ಕೂ ನಂಬಿಕೊಂಡು ಬಂದಿದ್ದಾರೆ. ಅಷ್ಟಲ್ಲದೇ ಅಳವಡಿಸಿಕೊಂಡು ಬಂದಿದ್ದಾರೆ. ಇನ್ನೂ ಹಲವಾರು ಜನಪದರು ನಂಬಿಕೆಗಳನ್ನು ಪ್ರೋತ್ಸಾಹಿಸುತ್ತಾ ಬಂದಿದ್ದಾರೆ.

**೬. ಸಂಬಂಧಗಳು**

ಮನುಷ್ಯ – ಮನುಷ್ಯರ ಸಂಬಂಧಗಳನ್ನು ಜಗತ್ತಿನಲ್ಲಿ ಕಾಣಬಹುದು ಅದೇ ರೀತಿ ಪ್ರಾಣಿ, ಪಕ್ಷಿ ಇತರೇ ಸಂಬಂಧಗಳನ್ನು ಈ ಭೂಮಂಡಲದ ಮೇಲೆ ನಾವು ನೋಡಬಹುದು. ದೇವರಿಗೂ ಮತ್ತು ಮಾನವರಿಗೆ ಯಾವ ರೀತಿಯಾದಂತಹ ಸಂಬಂಧಗಳಿವೆಯೋ ಪ್ರಾಣಿ, ಪಕ್ಷಿ, ಸಸ್ಯವರ್ಗಗಳು ಇವು ಕೂಡಾ

ದೇವರೊಂದಗಿನ ಸಂಬಂಧವನ್ನು ಬೆಸೆಯುವಲ್ಲಿ ಈ ನಮ್ಮ ಜನಪದರಿಂದ ಕಾಣಬಹುದು ಯಾವುದೋ ಒಂದು ಕಾರಣದಿಂದಲೂ ಸಂಬಂಧವನ್ನು ನೋಡಬಹುದು. ಇಲ್ಲಿ ಭೈರಾಪುರದ ಮರಿಸ್ವಾಮಿಗೆ ಮತ್ತು ಮಾನವರಿಗೆ ಯಾವ ರೀತಿಯ ಸಂಬಂಧಗಳಿವೆ ಎಂಬುದನ್ನು ನೋಡಬೇಕಾಗಿದೆ.

## ಅ. ಮರಿಸ್ವಾಮಿ ಮತ್ತು ಮಾನವ, ಪ್ರಾಣಿ, ಪಕ್ಷಿ, ಸಸ್ಯವರ್ಗಗಳೊಂದಿಗಿನ ಸಂಬಂಧ

ಮಾನವ ಬುದ್ಧಿಜೀವಿ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಯಾವುದನ್ನು ನಂಬಬೇಕು, ಯಾವುದನ್ನು ನಂಬಬಾರದು ಎಂಬ ಆಲೋಚನಾ ಶಕ್ತಿ ಯನ್ನು ಪಡೆದುಕೊಂಡಿರುವಂತವನು ಅಂತವನು ದೇವರನ್ನು ಯಾವ ರೀತಿಯಗಿ ಅಂದರೆ ಅವರ ಅಂತರ ಯಾವ ಮಟ್ಟದಲ್ಲಿದೆ ಎಂಬುದನ್ನು ನೋಡಬಹುದಾಗಿದೆ. ಭೈರಾಪುರ ಮರಿಸ್ವಾಮಿ ದೇವರನ್ನು ಅಲ್ಲಿನ ಜನರಷ್ಟೇ ಅಲ್ಲದೇ ಬೇರೆ ಊರಿನ ಜನರು ತಮ್ಮ ಮನದಾಳದಲ್ಲಿ ಆರಾಧನೆ ಮಾಡುತ್ತಾರೆ. ಏಕೆಂದರೆ ಅವರ ಕಷ್ಟದಲ್ಲಿ ಮನುಷ್ಯ ಯಾವ ರೀತಿಸಹಕಾರಿಯಾಗಿದ್ದಾನೊ ಅದೇ ರೀತಿಯಾಗಿ ದೇವರು ಕೂಡಾ ಸಹಾಯವನ್ನು ಮಾಡಿದ್ದಾನೆಂಬ ನಂಬಿಕೆ

ಈಗ ಲಿಂಗಾಯತ ಸಮುದಾಯದವರು ಹುಟ್ಟಿದಂದಿನಿಂದ ಸಾಯುವತನಕ ಎಲ್ಲಾ ಆಚರಣೆಗಳನ್ನು ಈ ಮರಿಸ್ವಾಮಿ ದೇವರ ಹೆಸರಿನಲ್ಲಿ ಮಾಡುತ್ತಾರೆ. ಹುಟ್ಟುವ ಮಗುವಿಗೆ ಮರಿಸ್ವಾಮಿ, ಮರಿದೇವ, ಮಹಾದೇವ ಇನ್ನೂ ಮುಂತಾದ ಹೆಸರುಗಳನ್ನು ನಾಮಕರಣ ಮಾಡುತ್ತಾರೆ. ಹಿಂದಿನಿಂದಲೂ ಅವರ ಪೂರ್ವಜರು ಕೂಡಾ ಈ ದೇವರನ್ನು ಆರಾಧಿಸುತ್ತಾ ಬಂದಿರುವುದರಿಂದ ಈ ದೇವರನ್ನು ಕೈಬಿಡುವಂತಿಲ್ಲ. ಅದೇ ರೀತಿಯಾಗಿ ಭೈರಾಪುರದಲ್ಲಿ ಅತೀ ಹೆಚ್ಚು ಕಾಡುಗೊಲ್ಲರು ಇರುವುದರಿಂದ ಅಲ್ಲಿ ಗೊಲ್ಲರು ಸಹ ತಮ್ಮ ಮನೆದೇವರನ್ನು ಪೂಜಿಸಿದರೂ ಸಹ ಈ ಮರಿಸ್ವಾಮಿ ದೇವರನ್ನು ಆರಾಧಿಸುತ್ತಾರೆ. ತಮ್ಮ ಪ್ರತಿಯೊಂದು ಆಚರಣೆಗಳಲ್ಲಿ ಕೂಡಾ ಅಂದರೆ ಮದುವೆ, ಹಬ್ಬ, ನಾಮಕರಣ, ಜವಳಿಕಾರ್ಯಕ್ರಮ ಇಂತಹ ಸಂದರ್ಭಗಳಲ್ಲಿಯೂ ಕೂಡಾ ಪೂಜೆ ಮಾಡುವುದು, ಅನ್ನ ಸಂತರ್ಪಣೆ ಮಾಡಿಸುವುದು ಈಗಲೂ ಸಹ ಕಾಣಬಹುದಾಗಿದೆ.

ಕೇವಲ ಭೆರಾಪುರ ಗ್ರಾಮದ ಜನರೊಂದೆ ಅಲ್ಲ ಕುರುಗೋಡು, ಬೆಂಗಳೂರು, ಬಳ್ಳಾರಿ ಕಡೆಯವರೂ ಸಹ ಬಂದು ಪೂಜೆ ಪುನಸ್ಕಾರ ಮಾಡಿಸಿಕೊಂಡು ಹೋಗುತ್ತಾರೆ. ಅದೇ ರೀತಿ ಗುಡ್ಡದಹಳ್ಳಿ ಗ್ರಾಮದವರು ಸಹ ಆರಾಧ್ಯ ದೈವ ಮತ್ತು ಮನೆದೇವರ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಮರಿಸ್ವಾಮಿಯ ವಾರ ಸೋಮವಾರದಂದು ವಿಶೇಷ ಪೂಜೆ ಮಾಡಿಸುತ್ತಾರೆ.

### ಪ್ರಾಣಿ ಪಕ್ಷಿ

ಭೈರಾಪುರದ ಮರಿಸ್ವಾಮಿ ಮಠದಲ್ಲಿ ಎರಡು ಗೂಳಿಗಳನ್ನು ಬಿಟ್ಟಿರುವುದನ್ನು ನಾವು ನೋಡಬಹುದು. ಅಂದರೆ ಇಲ್ಲಿ ದೇವರ ಹೆಸರಿನಲ್ಲಿ ಪ್ರಾಣಿಗಳಿಗೂ ಸಹ ಯಾವುದೇ ರೀತಿಯಾದಂತಹ

ತೊಂದರೆಯನ್ನು ಮಾಡಬಾರದು ಎಂಬ ಉದ್ದೇಶದಿಂದಲೂ ಅಥವಾ ಪ್ರಾಣಿವರ್ಗದ ಮೇಲಿನ ಪ್ರೀತಿಯಿಂದಲೂ ಇವುಗಳನ್ನು ಬಿಟ್ಟಿದ್ದಾರೆ. ಅವು ಯಾರ ಜಮೀನಿನಲ್ಲಿ ಬೆಳೆಯನ್ನು ಹಾಳು ಮಾಡಿದರು ಸಹ ಅದನ್ನು ಹೊಡೆದೋಡಿಸುವಂತಿಲ್ಲ. ಏಕೆಂದರೆ ಅದು ಮರಿಸ್ವಾಮಿ ಹೆಸರಿನಲ್ಲಿ ಬಿಟ್ಟಿರುವ ಗೂಳಿಯಾಗಿರುವುದರಿಂದ ಅದಕ್ಕೆ ಆಹಾರ ಇಡುತ್ತಾರಯೇ ಹೊರತು ಅದನ್ನು ಬಡಿಯುವುದಿಲ್ಲ. ಅಂದರೆ ಇಲ್ಲಿ ಪ್ರಾಣಿ ವರ್ಗಕ್ಕೂ ಕೂಡ ಅವಕಾಶವಿದೆ.

ಮರಿಸ್ವಾಮಿ ಜಾತ್ರೆಯ ಪಲ್ಲಕ್ಕಿ ಮೆರವಣಿಗೆಯ ದಿನದಲ್ಲಿ ಆ ಗೂಳಿಯನ್ನು ಸಹ ಮೆರವಣಿಗೆ ಹಾದಿಯಲ್ಲಿ ಅಂದರೆ ಅದನ್ನು ಮುಂದೆ ಮುಂದೆ ಹೊಡೆದುಕೊಂಡು ಹೋಗುತ್ತಾರೆ. ಅದರ ಹಿಂದೆ ಪಲ್ಲಕ್ಕಿ ಬರುತ್ತದೆ. ಅದಕ್ಕೆ ಬೇಕಾದ ಅಲಂಕಾರ ವಸ್ತ್ರಗಳನ್ನು ಧರಿಸಿ ಪ್ರತಿವರ್ಷ ಜಾತ್ರೆಯ ಸಂದರ್ಭದಲ್ಲಿ ಅದರಲ್ಲೂ ಪಲ್ಲಕ್ಕಿ ಉತ್ಸವ ಸಂದರ್ಭದಲ್ಲಿ ಅದು ಮುಂದುಗಡೆ ಇರುತ್ತದೆ. ಹಾಗೆಯೇ ದೇವರಿಗೆ ಸಲ್ಲುವ ಪೂಜೆ ಆ ಗೂಳಿಗೂ ಸಹ ಸಲ್ಲುತ್ತದೆ. ಅದಕ್ಕೆ ಬಸವಣ್ಣವೆಂತಲೂ ಕರೆಯುತ್ತಾರೆ. ಪೂಜಿಸಲು ಬಸವಣ್ಣನ ಗುಡಿ(ಪಾದಗಟ್ಟೆ ಗುಡಿ)ಯ ವರೆಗೂ ಈ ಪಲ್ಲಕ್ಕಿ ಉತ್ಸವ ಬರುತ್ತದೆ.

ಅದೇ ರೀತಿ ಈ ಊರಿನ ವಿಶೇಷವೆಂದರೆ ಇಲ್ಲಿ ಈ ಊರಿನ ಒಳಗಡೆ ಹಂದಿಯು ಬರುವಹಾಗಿಲ್ಲ. ಈ ದೇವರಿಗೆ ಯಾವುದೇ ರೀತಿಯ ಬಲಿದಾನಗಳು ನೆಡೆಯುವುದಿಲ್ಲ.ಕಾರಣ ಲಿಂಗಧಾರಣೆಯಾದ ಮರಿಸ್ವಾಮಿ ಶಿವನ ಕೃಪೆಯಿಂದ ಅವತರಿಸಿದ್ದರಿಂದ ಈ ದೇವರಿಗೆ ಬಲಿದಾನ ಕೊಡುವುದಿಲ್ಲ. ಹಂದಿಯನ್ನು ಊರ ಒಳಗಡೆ ಬರುವಹಾಗಿಲ್ಲ. ಇದು ಒಳಗಡೆ ಬಂದರೆ ಊರಿಗೆ ಅನಿಷ್ಟವೆಂತಲೂ ತಿಳಿಯುತ್ತಾರೆ. ಮರಿಸ್ವಾಮಿ ಲಿಂಗಧಾರಣೆಯಾಗಿರುವುದರಿಂದ ಅಂದರೆ ಹಂದಿ ಕೀಳು ಪ್ರಾಣಿಯಾಗಿರುವುದರಿಂದಲೂ ಅದನ್ನು ಊರ ಒಳಗಡೆ ಬಿಟ್ಟುಕೊಳ್ಳುವುದಿಲ್ಲ. ಒಂದು ವೇಳೆ ಬಂದರೆ ಅದನ್ನು ಹೊಡೆದೋಡಿಸುತ್ತಾರೆ. ಆದುದರಿಂದ ಹಂದಿಯನ್ನು ಊರ ಒಳಗಡೆ ಬಿಟ್ಟುಕೊಳ್ಳುವುದಿಲ್ಲ.

ಈ ದೃಷ್ಟಿಯಿಂದ ನೋಡುವುದಾದರೆ ಕೆಳವರ್ಗದ ಜನರು ಆ ದೇವರನ್ನು ಸ್ವತ: ಪೂಜಿಸುವ ಸಾಮಗ್ರಿಗಳನ್ನು ಅವರೇತೆಗೆದುಕೊಂಡು ಹೋಗುವುದಿಲ್ಲ. ಮೇಲ್ವರ್ಗದ ಜನರ ಕೈಯಲ್ಲಿ ಕೊಟ್ಟಾಗ ಮಾತ್ರ ಪೂಜೆ ಮಾಡುತ್ತಾರೆ. ಒಂದು ವೇಳೆ ನಾವೇ ತೆಗೆದುಕೊಂಡು ಹೋದರು ಸಹ ನಮಗೆ ಒಳ್ಳೆಯದಾಗುವುದಿಲ್ಲ. ಏನಾದರೂ ಒಂದು ಅನಾಹುತ ಆಗಬಹುದು ಎಂಬ ಭಯದಿಂದ ಅವುಗಳನ್ನು ಯಾರು ಮುಟ್ಟುವುದಿಲ್ಲ.

## ಸಸ್ಯ ವರ್ಗಗಳೊಂದಿಗಿನ ಸಂಬಂಧ

ಜನಪದರು ಒಂದು ದೇವರನ್ನು ಆರಾಧಿಸಿದರೆ ಮಲಗುವಾಗಲೂ ಸಹ ಆ ದೇವರನ್ನು ನೆನೆದು ಮಲಗಿಕೊಳ್ಳುತ್ತಾರೆ. ವ್ಯವಸಾಯದಲ್ಲಿಯೂ ಸಹ ಅಷ್ಟೇ ಸೋಮವಾರದಂದು ಮರಿಸ್ವಾಮಿಯ

ವಾರವಾಗಿರುವುದರಿಂದ ಆ ದಿನ ವ್ಯವಸಾಯಕ್ಕೆ ಗಳೇವು ಹೂಡುವುದಿಲ್ಲ. ಏಕೆಂದರೆ ಆ ದಿನ ಬಸವನ ದಿನವೆಂದೇ ಪೂಜಿಸುತ್ತಾರೆ. ಆದ್ದರಿಂದ ಅಂದು ಪ್ರತಿಯೊಬ್ಬರೂ ವ್ಯವಸಾಯ ಕಟ್ಟುವುದೇ ಇಲ್ಲ. ವ್ಯವಸಾಯ ಮಾಡುವಾಗಲೂ ಸಹ ಅಷ್ಟೇ ಭೂಮಿಯನ್ನು ಹದ ಮಾಡಿ ಬೀಜವನ್ನು ನೆಡುವಾಗಲೂ ಅಥವಾ ಚೆಲ್ಲುವಾಗ ಕೂಡ ಆ ಗದ್ದೆಗಳಿಗೆ ಮರಿಸ್ವಾಮಿ ವಾರದಂದೇ ಬೀಜವನ್ನು ಚೆಲ್ಲುವುದು ಆ ದೇವರ ತೀರ್ಥದ ನೀರನ್ನು ಸಹ ಬೀಜಗಳ ಮೇಲೆ ಸಿಂಪಡಿಸಿ ಹಾಕುತ್ತಾರೆ.ಅದಕ್ಕಿಂತ ಮುಂಚೆ ಮರಿಸ್ವಾಮಿ ದೇವಸ್ಥಾನಕ್ಕೆ ಹೋಗಿ ದೇವರ ಮುಂದೆ ಬೀಜವನ್ನು ಇಟ್ಟು ಪೂಜೆಮಾಡಿಕೊಂಡು ಅಲ್ಲಿ ಮೂರು ಮೂರು ಬೀಜಗಳನ್ನಿಟ್ಟು ನಂತರ ಅದರಲ್ಲಿನ ಬೀಜಗಳನ್ನು ತೆಗೆದುಕೊಂಡು ಬೀಜವನ್ನು ಬಿತ್ತನೆ ಮಾಡುತ್ತಾರೆ. ಆಗ ಹರಕೆಯನ್ನು ಹೊರುತ್ತಾರೆ. ಈ ಸಾರಿ ಬೆಳೆ ಚೆನ್ನಾಗಿ ಬಂದರೆ ಅನ್ನ ಸಂತರ್ಪಣೆ ಮಾಡಿಸುವುದು ನಂದಿಕೋಲು ಮಾಡಿಸಿಕೊಡುವುದು ಇತ್ಯದಿ.

ಫಸಲು ಕೈಗೆ ಬಂದಾಗ ಯಾವುದಾದರೂ ಬೆಂಕಿರೋಗ, ಸಿಡಿಲುರೋಗ ಈ ರೀತಿಯ ರೋಗ ಬಂದಾಗ ದೇವಸ್ಥಾನಕ್ಕೆ ಬಂದು ತೀರ್ಥವನ್ನು ತೆಗೆದುಕೊಂಡು ಹೋಗಿ ಗೊಬ್ಬರದ ಜೊತೆಯಲ್ಲಿ ಇದನ್ನು ಕಲಬೆರಿಕೆ ಮಾಡಿ ಔಷದಿ ಸಿಂಪಡಿಸುವುದು ಹಾಗೂ ಬೆಳೆಯ ಸುತ್ತಲೂ ಸರಗವನ್ನು ಚೆಲ್ಲುವುದು ಜನಪದರ ನಂಬಿಕೆ. ಆಗ ಬೆಳೆಗೆ ಬಂದತಹ ರೋಗ ನಿವಾರಣೆಯಾಗುವುದು. ಎಂಬ ಗಾಢವಾದ ನಂಬಿಕೆ ಈ ಜನಪರದ್ದು.

ಅದೇ ರೀತಿಯಾಗಿ ಬಂದಂತಹ ಫಸಲನ್ನು ಕೊಯ್ಯಲು ಮಾಡುವಾಗಲು ಸಹ ಮರಿಸ್ವಾಮಿ ವಾರದಂದು ಅಥವಾ ಬೇರೆ ದಿನದಂದು ಪೂಜೆ ಮಾಡಿ ಫಸಲನ್ನು ಕೊಯ್ಯಲು ಮಾಡುತ್ತಾರೆ. ಏಕೆಂದರೆ ಕೊಯ್ಯಲು ಮಾಡಿದ ನಂತರ ದವಸ ಹೆಚ್ಚಿನದಾಗಿ ಸಿಗಲಿ ಎಂಬ ನಂಬಿಕೆ ಅವರದು. ನಂತರ ಫಸಲು ಎಲ್ಲಾ ತೆನೆ ಕಾಳು ಎಲ್ಲ ಬೇರ್ಪಡಿಸಿ ರಾಶಿಗೆ ಹಾಕಿದಾಗ ಮತ್ತೇ ರಾಶಿಗೆ ಒಂದು ಸಾರಿ ಪೂಜೆ ಮಾಡಿ ಮೊದಲಿಗೆ ಮರಿಸ್ವಾಮಿ ಹೆಸರಿನಲ್ಲಿ ಹಾಗೂ ವೀರಭದ್ರನ ಹೆಸರಿನಲ್ಲಿ ನೂಕೆಮಾಲೆ ಸಿದ್ದೇಶನ ಹೆಸರಿನಲ್ಲಿ ಹಾಗೂ ವೀರಭದ್ರನ ಹೆಸರಿನಲ್ಲಿ ಮೂರು ರಾಶಿ ಚಿಕ್ಕದಾಗಿ ಹಾಕುತ್ತಾರೆ. ಕೇಳಿದರೆ ಇದು ದೇವರಿಗೆ ಎಂದು ಹೇಳುತ್ತಾರೆ ಆದ್ದರಿಂದ ಈ ರೀತಿಯಾಗಿ ಬೆಳೆಯಲ್ಲಿ ಬಂದಂತಹ ಫಲದಲ್ಲಿ ಮೊದಲಿಗೆ ಆ ದೇವರಿಗೆ ತೆಗೆದ ನಂತರ ತಾವು ಚೀಲದಲ್ಲಿ ತುಂಬಿಕೊಳ್ಳುತ್ತಾರೆ. ಈ ರೀತಿಯಾಗಿ ಜಾನಪದರು ದೇವರ ಮೇಲೆ ಅಷ್ಟೊಂದು ಆರಾಧ್ಯ ದೈವನನ್ನಾಗಿ ಮಾಡಿಕೊಂಡಿದ್ದಾರೆ. ಕೇವಲ ಒಂದೇ ಗ್ರಾಮದಲ್ಲಿ ಮಾತ್ರವಲ್ಲದೇ ಅಕ್ಕಪಕ್ಕದ ಊರಿನ ಜನರು (ಕೃಕರು) ಈ ರೀತಿಯಾಗಿ ಮಾಡುತ್ತಾರೆ.

### ಆ. ಇತರೆ ದೈವಗೊಳಿಂದಿಗೆ ಸಂಬಂಧ

ಭೈರಾಪುರ ಗ್ರಾಮದಲ್ಲಿ ಶ್ರೀಮರಿಸ್ವಾಮಿದೇವರೆ ಪ್ರಧಾನ ದೈವ. ಆದರೆ ಈ ದೇವರೊಂದೆ ದೇವರಲ್ಲ. ಈ ದೇವರೊಂದಿಗೆ ಇನ್ನೂ ಹಲವಾರು ದೇವರುಗಳು ಇವೆ. ಶ್ರೇಣೀಕರಣದ ದೃಯಲ್ಲಿ ನೋಡಿದರೆ ಶ್ರೀ

ಮರಿಸ್ವಾಮಿ ದೇವರು ಎಲ್ಲಕ್ಕಿಂತ ಹೆಚ್ಚು ಪೂಜೆಗೆ ಒಳಗಾಗುವ ದೇವರು ಅನಂತರ ಇತರೆ ದೇವರುಗಳು ಜಾತ್ರೆಯಲ್ಲಿ ಮರಿಸ್ವಾಮಿ ದೇವರಿಗೆ ಪ್ರಧಾನ ಸ್ಥಾನ ನೀಡಿದರೂ ಉಳಿದ ದೈವಗಳಿಗೂ ಜನರು ಸೇವೆ ಸಲ್ಲಿಸುತ್ತಾರೆ. ಈ ಗ್ರಾಮದಲ್ಲಿರುವ ಇತರ ದೇವರೆಂದರೆ ಪಾದಗಟ್ಟೆ ಗುಡಿ, ಬಸವಣ್ಣ ನಕಟ್ಟೆ, ಹನುಮಂತರಾಯನ ಗುಡಿ, ಊರಮಾರೆಮ್ಮನ ಗುಡಿ, ಈಶ್ವರನ ಗುಡಿ ಹಾಗೂ ಊರಿನಿಂದ ಅರ್ಧ ಕಿ.ಮೀ. ದೂರದಲ್ಲಿರುವ ಎರಬಳ್ಳಿ ಮಾರೆಮ್ಮಳ ಗುಡಿ ಇದು ಗುಡ್ಡದಹಳ್ಳಿ ಹಾಗೂ ಭೈರಾಪುರ ಗ್ರಾಮಗಳ ನಡುವಿನ ಒಲುಮೆರೆಯಲ್ಲಿದೆ. ಹಾಗೂ ಹೊನ್ನೂರು ಸ್ವಾಮಿಯ (ಪೀರಲ ದೇವರು) ಗುಡಿಯ ಪರದಿಯಲ್ಲಿ ಇದೆ. ಇದು ಹಿಂದೂ ಮುಸ್ಲಿಂ,ರ ಬಾಂದವ್ಯವನ್ನು ಸೂಚಿಸುವಂತಹ ಗುಡಿಯಾಗಿದೆ. ಅಷ್ಟಲ್ಲದೇ ಭೈರಾಪುರದಿಂದ ಎರಡು ಕಿ.ಮೀ. ದೂರದಲ್ಲಿರುವ ಗುಡ್ಡದಳ್ಳಿಯಲ್ಲಿರುವ ದೇವರುಗಳಿಗೂ ಸಹ ಪೂಜೆ ಪುನಸ್ಕಾರ ಈ ಊರಿನ ಜನಗಳು ಆಚರಿಸುತ್ತಾರೆ. ಅಂತಹ ಆಚರಣೆಗೊಳಗಾಗುವ ದೇವರುಗಳೆಂದರೆ ಅಕ್ಕಮ್ಮ ದೇವರು ಮತ್ತು ಈಶ್ವರ ದೇವರು ಈ ಎರಡು ಊರಿನ ಗ್ರಾಮಸ್ಥರು ಒಂದೇ ಕುಟುಂಬದ ಅಣ್ಣತಮ್ಮಂದಿರ ರೀತಿಯಲ್ಲಿ ಇವೆ ಈ ರೀತಿಯ ದೈವಗಳಿಗೆ ಒಂದೊಂದು ಪ್ರಮುಖ ಸ್ಥಾನವಿದೆ.

### ಹೊನ್ನೂರು ಸ್ವಾಮಿ

ಭೈರಾಪುರದ ಅತೀ ದೊಡ್ಡ ಶ್ರೀಮರಿಸ್ವಾಮಿ ದೇವಸ್ಥಾನದಿಂದ ಹೊನ್ನೂರಸ್ವಾಮಿ ದೇವಸ್ಥಾನ ಪೂರ್ವ ದಿಕ್ಕಿನ ಕಡೆಗೆ ಇದೆ. ಈ ದೇವರಿಗೆ ಮುಸ್ಲಿಂ ರು ಪೂಜಿಸುವಂತಹ ದೇವರಾಗಿದೆ. ಮರಿಸ್ವಾಮಿ ದೇವಸ್ಥಾನಕ್ಕೆ ಹೋಗುವಾಗ ಮರಿಸ್ವಾಮಿಗುಡಿಯ ಕಾಂಪೌಂಡಿಗೆ ಕಟ್ಟಲಾಗಿದೆ. ಈ ದೇವರ ಚರಿತ್ರೆಯನ್ನು ತಿಳಿಯುವುದಾದರೆ ಮರಿಸ್ವಾಮಿ ಗುಡಿಯನ್ನು ಕಟ್ಟಿಸುವಾಗಲೇ ಈ ಗುಡಿಯನ್ನು ಅದೇ ಹಣದಲ್ಲಿ ಹಿಂದೂಗಳು ಕಟ್ಟಿಸಿರುವಂಥದ್ದು, ಅಂದರೆ ೧೯ನೇ ಶತಮಾನದಲ್ಲಿ ಈ ಗುಡಿಯನ್ನು ಕಟ್ಟಲಾಗಿದೆಯೆಂದು ಶ್ರೀಮರಿಸ್ವಾಮಿಯ ಮುಂಬಾಗದಲ್ಲಿ ನಮೂದಿಸಿದ್ದಾರೆ. ಈ ದೇವಸ್ಥಾನದ ಹಿಂದೂ– ಮುಸ್ಲಿಂರ ಏಕತೆ ಬಾಂಧವ್ಯವನ್ನು ಬೆಸೆಯುವಲ್ಲಿ ಈ ದೇವರು ಗುಡಿುಂದ ತಿಳಿದು ಬರುತ್ತದೆ. ಮರಿಸ್ವಾಮಿಯ ಜಾತ್ರೆಯ ಸಂರ್ಭದಲ್ಲಿ ಈ ದೇವರಿಗೂ ಸಹ ಪೂಜೆ ನಡೆಯುತ್ತದೆ. ಅದರಂತೆ ಈ ದೇವರಿಗೆ ಅಂದರೆ ಮರಿಸ್ವಾಮಿ ದೇವರಿಗೆ ಮುಸ್ಲಿಂರು ಸಹ ನೆಡೆದುಕೊಳ್ಳತ್ತಾರೆ. ಹರಕೆಗಳನ್ನು ಹಾಗೂ ನಂಬಿಕೆಗಳನ್ನು ಅವರು ಆಚರಿಸುತ್ತಾ ಬಂದಿದ್ದಾರೆ. ಅಂದಿನಿಂದಲೂ ಮುಸ್ಲಿಂ ದೇವರನ್ನು ನಮ್ಮ ಹಿಂದೂಗಳು ಸಹ ಮೊಹರಂ ಹಬ್ಬದಂದು ಹಿಂದೂ ಮುಸ್ಲಿಂರು ಈ ಹಬ್ಬವನ್ನು ಆಚರಿಸುತ್ತಾರೆ. ಹೊನ್ನೂರುಸ್ವಾಮಿಯ ದೇವರನ್ನು ನಮ್ಮದೇ ದೇವರು ಎಂದು ಹಿಂದುಗಳು ಸಹ ಆಚರಣೆ ಮಾಡುತ್ತಾರೆ. ಹಾಗೂ ದೇವರಿಗೆ ಕೆಲವೊಂದು ಹರಕೆಗಳನ್ನು ಹೊರುತ್ತಾರೆ. ಭೈರಾಪುರದ ಗ್ರಾಮಸ್ಥರನ್ನು ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಂದರ್ಶಿಸಿದಾಗ ಭೈರಾಪುರದ ಮರಿಸ್ವಾಮಿ ಗುಡಿಯನ್ನು ಕಟ್ಟಿಸುವಾಗ ಉಳಿದ ಹಣದಿಂದ ಮುಸ್ಲಿಂ (ಹೊನ್ನೂರಸ್ವಾಮಿಯ) ಗುಡಿಯನ್ನು ಕಟ್ಬೋಣವೆಂದು ಮಾತುಕತೆ ಮಾಡಿಕೊಂಡು ಕಟ್ಟಿದ್ದಾರೆ. ಏಕೆಂದರೆ ಈ ಮರಿಸ್ವಾಮಿ ಗುಡಿಗೆ ಭಕ್ತರಲ್ಲಿ ಮುಸ್ಲಿಂರು ಬರುತ್ತಿದ್ದರಂತೆ ಆದ್ದರಿಂದ ಅವರಿಗಾಗಿ ಒಂದು ಗುಡಿ ಇರಲೆಂದು ಕಟ್ಟಿಸಿದ್ದಾರೆ.

## ಪಾದಗಟ್ಟಿಗುಡಿ–ಬಸವೇಶ್ವರ ಕಟ್ಟೆ

ಊರಿನ ಪೂರ್ವ ದಿಕ್ಕಿಗೆ ಮರಿಸ್ವಾಮಿ ಗುಡಿ ೧ಂದ ಪರ್ಲಂಗ್ ದೂರದಲ್ಲಿ ಈ ಗುಡಿಯಿದೆ. ನಾಗಸಮುದ್ರ ಮತ್ತು ಗುಡ್ಡದಹಳ್ಳಿ ಗ್ರಾಮಗಳಿಗೆ ಹೋಗುವ ಕವಲಾಗುವ ರಸ್ತೆಯಲ್ಲಿ ಇ ಗುಡಿಯು ಇದೆ.ಇದು ಮರಿಸ್ವಾಮಿ ದೇವರ ಗುಡಿಗೆ ಅಭಿಮುಖವಾಗಿ ಈ ಗುಡಿಯನ್ನು ಕಟ್ಟಿದ್ದಾರೆ. ಈ ಗುಡಿ ಊರಿನ ಕೊನೆಯ ಭಾಗದಲ್ಲಿದೆ. ಮರಿಸ್ವಾಮಿ ಜಾತ್ರೆಯ ರಥೋತ್ಸವ ಸಂದರ್ಭದಲ್ಲಿ ಮೆರವಣಿಗೆಯ ಮೂಲಕ ರಥೊತ್ಸವ ಈ ಗುಡಿಯತನಕ ಎಳೆಯುತ್ತಾರೆ.ನಂತರ ಆ ಪಾದಗಳಿಗೆ ಪೂಜೆ ಮಾಡಿ ನಂತರ ವಾಪಾಸಗಿ ರಥೋತ್ಸವ ಹಿಂದಿರುಗುತ್ತದೆ. ನಂತರ ಎರಡನೆಯ ದಿನ ಮರಿಸ್ವಾಮಿಯ ಪಲ್ಲಕ್ಕಿ ಉತ್ಸವ ಬೆಳಿಗ್ಗೆ ನಡೆಯುತ್ತದೆ. ಅದು ಸಹ ಗುಡಿಂದ ಪಲ್ಲಕ್ಕಿ ಉತ್ಸವ ಮೆರವಣಿಗೆಯ ಮೂಲಕ ಪಾದಗಟ್ಟಿಗುಡಿಯನ್ನು ಸೇರುತ್ತದೆ. ಆ ಗುಡಿಗೆ ಪೂಜೆ ಮಾಡಿಕೊಂಡು ಪುನ: ಮರಿಸ್ವಾಮಿ ಗುಡಿಯನ್ನು ಸೇರುತ್ತದೆ. ಹಿಗೇ ಈ ಗುಡಿಯ ಮತ್ತು ಮರಿಸ್ವಾಮಿ ದೇವರ ಗುಡಿಯ ನಡುವೆ ಸಂಬಂಧವಿದೆ. ಅದೇ ರೀತಿ ಈ ಪಾದಗಟ್ಟಿ ಗುಡಿಯ ಎದುರುಗಡೆ ಶ್ರೀ ಬಸವೇಶ್ವರ ಕಟ್ಟಿದೆ. ಇದಕ್ಕೂ ಸಹ ಅಂದು ಪೂಜೆ ನಡೆಯುತ್ತದೆ.

## ಹನುಮಂತರಾಯ

ಊರು ಸುಟ್ಟರೂ ಹನುಮಪ್ಪ ಊರ ಹೊರಗೆ ಎಂಬ ಗಾದೆಯಂತೆ ಎಲ್ಲಾ ಊರುಗಳಲ್ಲಿ ಹನುಮಂತರಾಯನ ಗುಡಿ ಊರ ಹೊರಗೆ ಇರುತ್ತದೆ. ಹನುಮದಿಕ್ಕಿಗೆ ಹನುಮ ಬಾಗಿಲು ಅಂದರೆ ದಕ್ಷಿಣದ ಕಡೆಗೆ ಮುಖ ಬೀರುವುದಕ್ಕೆ ಹನುಮನ ಬಾಗಿಲು ಎಂದು ಕರೆಯುವ ವಾಡಿಕೆ ಇದೆ. ಈತ ಶ್ರೀ ಮರಿಸ್ವಾಮಿ ದೇವರಿಂದ ಲಿಂಗಧಾರಣೆ ಹೊಂದಿದ ತ್ರಿಕಾಲ ಲಿಂಗಪೂಜಿತ ಈತ ದೇವಲೋಕದಲ್ಲಿ ಗಾನಗಂಧರ್ವನೆಂಬ ಬಿರುದು ಪಡೆದಾತ ಆಗಲೇ ಕೈಲಾಸದಲ್ಲಿ ಶಿವನಿಂದ ಒಂದು ರೋಮಕ್ಕೆ ಎರಡು ಕೋಟಿ ಶಿವಲಿಂಗಗಳು ಎನ್ನುವ ವರ ಪಡೆದಾತ. ಭೀಮ ದ್ರೌಪದಿಗೆ ಸೌಗಂಧಿಕಾ ಪುಷ್ಪ ತರಲು ಹೋಗುವಾಗ ದಾರಿಗೆ ಅಡ್ಡವಾಗಿ ಹನುಮ ಕುಳಿತಿರುವುದನ್ನು ನೋಡಿ, ಭೀಮನು ಏ ಕಪಿಯೇ ನಾನು ಬಂದಿದ್ದೇನೆ. ದಾರಿಗೆ ಅಡ್ಡ ಹಾಕಿರುವ ಬಾಲ ಸೆಳೆದಿಕೋ ಎಂದು ಗರ್ವದಿಂದ ನುಡಿದ , ಅಪ್ಪಾ ! ನಾನು ಮುದಿಯ, ಬಾಲ ಎತ್ತಲಾರೆ. ಬಾಲವನ್ನು ಸರಿಸಿ ನೀನೆ ಮುನ್ನಡೆ ಎಂದು ತಿಳಿಸಿದ ಅದರಂತೆ ಭೀಮನು ಬಲವಾ ಗದುಂದ ತನ್ನ ಸೊಕ್ಕಿನ ಬಲವನ್ನು ಪ್ರಯೋಗ ಮಾಡಿ ದೂಡಲು ಬಾಲ ಸ್ವಲ್ಪವೂ ಅಲುಗಾಡಲಿಲ್ಲ. ಆಗ ನೊಂದು ಭೀಮನು ದೈನ್ಯದಿಂದ ಮಹಾನುಭಾವ ನೀನಾರು? ಹೀಗೆಕೆ ಮಾಡಿದೆ. ಎಂದು ಕೇಳಿದಾಗ ನಾನು ವಾಯುಪುತ್ರ ಹನುಮಂತ ಎಂದನು. ಭೀಮನು ವಾಯುಪುತ್ರನೇ ಇಬ್ಬರೂ ಸಹೋದರರಾದ ಕಾರಣ ಅನುಕಂಪ ಬಂದು ಆಲಿಂಗನ ಮಾಡಿಕೊಂಡು ಆನಂದ ಬಾಷ್ಪ ಸುರಿಸಿದನು. ಈ ರೀತಿಯ ಹನುಮಂತನ ಕಥೆಗಳಿವೆ.

## ಎರೆಬಳ್ಳಿ ಮಾರೆಮ್ಮ

ಈ ಗ್ರಾಮದೇವತೆಯು ಮರಿಸ್ವಾಮಿ ಗುಡಿಂದ ಸುಮಾರು ಅರ್ಧ ಕಿ.ಮೀ.ದೂರದಲ್ಲಿದೆ. ಈ ದೇವತೆಯು ಮಂಗಳವಾರ ಮತ್ತು ಶುಕ್ರವಾರದಂದು ಪೂಜೆಗೊಳಗಾಗುತ್ತಾಳೆ. ಭಕ್ತಾಧಿಗಳು ಬೇರೆ ಬೇರೆ

ಕಡೆಯಿಂದಲೂ ಬರುತ್ತಾರೆ. ಈ ದೇವತೆಯ ಗುಡಿ ಬಳ್ಳಾರಿ –ಬೆಂಗಳೂರು ರ್‍ರಾಷ್ಟ್ರೀಯ ಹೆದ್ದಾರಿಯ ರಸ್ತೆಯ ಪಕ್ಕದಲ್ಲಿದೆ. ಈ ದೇವತೆಯು ಭೈರಾಪುರದ ದೇವತೆಯಾಗಿದ್ದಾಳೆ. ಮಾರೆಮ್ಮನ ಹಬ್ಬಕ್ಕೆ ಇಲ್ಲಿ ಕಾಡುಗೊಲ್ಲರು, ಊರುಗೊಲ್ಲರು ಬಲಿಧಾನ ಮಾಡುತ್ತಾರೆ. ಈ ದೇವತೆಯ ಬಗ್ಗೆ ನಂಬಿಕೆಗಳು ಸಹ ಸತ್ಯತೆಯಿಂದ ಕೂಡಿವೆ ಎಂದು ಜನರು ನಂಬಿದ್ದಾರೆ. ೨೦೦೫ನೇ ಸಾಲಿನಲ್ಲಿ ಬಳ್ಳಾರಿ–ಬೆಂಗಳೂರು ರ್‍ರಾಷ್ಟ್ರೀಯ ಹೆದ್ದಾರಿ ಕಾಮಗಾರಿ ಸಂದರ್ಭದಲ್ಲಿ ಈ ಗುಡಿಯು ರಸ್ತೆಗೆ ಬರುತ್ತದೆ. ಎಂದು ಕಿತ್ತಲು ಹೋದಾಗ ಅವರ ಕಣ್ಣುಗಳೇ ಕಾಣಿಸದಂತಾದವಂತೆ, ಹಾಗೆಯೇ ಇನ್ನೊಂದು ವಿಚಾರ ಆ ಗುಡಿಯ ಬದಲು ಇನ್ನೊಂದು ಗುಡಿಯನ್ನು ಕಟ್ಟಿಸಿ, ದೇವತೆಯನ್ನು ಸ್ಥಳಾಂತರಿಸಿದರು. ಆದರೆ ಆ ವರ್ಷ ಮಳೆ ಬಾರದೇ ಇದ್ದುದರಿಂದ ಗುಡ್ಡದಹಳ್ಳಿ ಗ್ರಾಮಸ್ಥರು ಮತ್ತು ಭೈರಾಪುರದ ಗ್ರಾಮಸ್ಥರು ಕೂಡಿ ಮೊದಲಿನ ಗುಡಿಗೆ ತಂದಿಟ್ಟಿದ್ದಾರೆ ಅಥವಾ ಪ್ರತಿಸ್ಥಾಪಿಸಿದ್ದಾರೆ. ಆ ನಂತರ ಮಳೆಯು ಬಂದಿತು ಎಂದು ಜನ ಹೇಳುತ್ತಾರೆ. ಈ ಮರಿಸ್ವಾಮಿ ದೇವರಿಗೆ ತಂಗಿಯಾಗಬೇಕು ಎಂದು ಗ್ರಾಮಸ್ಥರು ಹೇಳುತ್ತಾರೆ. ಈ ಮರಿಸ್ವಾಮಿ ಜಾತ್ರೆಯ ಸಂದರ್ಭದಲ್ಲಿ ದೇವತೆಗೂ ಕೂಡ ಪೂಜೆ ಮಾಡುತ್ತಾರೆ. ಈ ಮಾರೆಮ್ಮ ದೇವತೆಗೆ ಎರಬಳ್ಳಿ ಮಾರೆಮ್ಮ ಎಂದು ಕರೆಯುತ್ತಾರೆ.

## ಗ್ರಾಮದೇವತೆ ಮಾರೆಮ್ಮ

ಮರಿಸ್ವಾಮಿ ಗುಡಿಯಿಂದ ಈ ಮಾರೆಮ್ಮಳ ಗುಡಿ ಪೂರ್ವದಿಕ್ಕಿನಲ್ಲಿದೆ. ಈ ದೇವತೆಯ ಗುಡಿಯು ದೊಡ್ಡದಾದ ಗುಡಿಯೇನಲ್ಲ. ಚಿಕ್ಕದಾದ ಗುಡಿ ಈ ಗುಡಿಯ ಪುಜಾರಿ ಎಳವ ಜನಾಂಗದವರು ಈ ದೇವತೆಯು ಮರದಿಂದ ಮಾಡಿದಂತಹ ಪ್ರತಿಮೆಯಾಗಿದೆ. ಅದಕ್ಕೆ ನಾನಾ ವಿಧದ ಬಣ್ಣದಿಂದ ಅಲಂಕಾರ ಮಾಡಿ ಸೀರೆಯನ್ನು ತೊಡಿಸಿದ್ದಾರೆ. ಈ ಗುಡಿಯ ಭಕ್ತರು ಹೆಚ್ಚಾಗಿ, ಒಡ್ಡರು, ಹೆಳವರು ಹಾಗೇಯೇ ಎಲ್ಲಾ ಜನಾಂಗದವರು ಸಹ ಪೂಜೆ ಮಾಡುತ್ತಾರೆ ಮಂಗಳವಾರ ಮತ್ತು ಶುಕ್ರವಾರ ಈ ದೇವತೆಯ ವಾರವಾಗಿದೆ. ಈ ದೇವತೆ ಸಹ ಮರಿಸ್ವಾಮಿ ದೇವರ ತಂಗಿಯಂತಲೂ ಕರೆಯುತ್ತಾರೆ. ಈಕೆಯನ್ನು ಊರಮಾರೆಮ್ಮ ಎಂತಲೂ ಕರೆಯುತ್ತಾರೆ.

## ಅಕ್ಕಮ್ಮ

ಈ ದೇವತೆಯು ಮರಿಸ್ವಾಮಿ ದೇವರ ಅಕ್ಕಳಂತೆ, ಮರಿಸ್ವಾಮಿ ದೇವರ ಹೆಚ್ಚಿನ ಭಕ್ತರಾದ ವೀರಶೈವ ಜನಾಂಗದವರು ಈ ದೇವತೆಯನ್ನು ಆರಾದಿಸುತ್ತಾರೆ. ಈ ದೇವತೆ ಭೈರಾಪುರ ಗ್ರಾಮದಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿರುವ ಗುಡ್ಡದಹಳ್ಳಿ ಗ್ರಾಮದ ಬೆಟ್ಟದಲ್ಲಿ ಈಕೆಯ ವಾಸಸ್ಥಳವಾಗಿದೆ. ಈ ದೇವತೆಯ ಚರಿತ್ರೆಯನ್ನು ತಿಳಿಯಲು ಯಾವುದೇ ಆಧಾರಗಳು ಸಹ ದೊರೆತಿಲ್ಲ. ಈ ದೇವತೆಯನ್ನು ಎಲ್ಲಾ ಜನಾಂಗದವರು ಸಹ ಪೂಜಿಸುತ್ತಾರೆ. ಈಕೆಯನ್ನು ನೆನೆಯುವಂತಹ ಸಂದರ್ಭವೆಂದರೆ ಮಳೆಗಾಲ ಕಡಿಮೆಯಾದಾಗ ಆ ದೇವತೆಯ ಪೂಜೆಯನ್ನು ಮಾಡುತ್ತಾರೆ. ಗುಡ್ಡದಹಳ್ಳಿ ಗ್ರಾಮದ ಜನರು ಊರಿನಲ್ಲಿ ಪಟ್ಟಿ ಎತ್ತಿ ಸೋಮವಾರದಂದು ಈಕೆಯ ಬೆಟ್ಟಕ್ಕೆ ಎಲ್ಲಾ ಜಾತಿ ಜನಾಂಗದವರು ಹೋಗಿ ಪೂಜಿಸಿ ಅನ್ನದಾಸೋಹ ಮಾಡುತ್ತಾರೆ. ಅಲ್ಲಿಗೆ ಭೈರಾಪುರದ ಗ್ರಾಮಸ್ಥರು ಸಹ ಬರುತ್ತಾರೆ. ಆಕೆಯನ್ನು ಪೂಜಿಸುವವರು ಭೈರಾಪುರದ ವೀರಶೈವ ಭಕ್ತಾದಿಗಳು ಒಂದು ವೇಳೆ ಅವರು ಬಾರದೇ ಪಕ್ಷದಲ್ಲಿ ಊರಿನ

ತಳವಾರ ಪೂಜಿಸುತ್ತಾರೆ. ಕೆಲವೊಂದು ಹಬ್ಬ ಹರಿದಿನ ಸಂದರ್ಭದಲ್ಲಿ ಅಥವಾ ಶುಭಸಮಾರಂಭಗಳಲ್ಲಿ ಭೈರಾಪುರದ ಜನರು ಅಥವಾ ಭಕ್ತಾದಿಗಳು ಬಂದು ಪೂಜೆ ಮಾಡಿಕೊಂಡು ಹೋಗುತ್ತಾರೆ.

## ಈಶ್ವರ

ಇದು ಸಹ ಗುಡ್ಡದಹಳ್ಳಿ ಗ್ರಾಮದಲ್ಲಿರುವಂತಹ ದೇವರಾಗಿದ್ದು, ಈ ದೇವರಿಗೆ ಸಹ ಮರಿಸ್ವಾಮಿ ದೇವರಿಗೆ ಸಂಬಂಧಿಸಿದಂತೆ ಕಾಣುತ್ತದೆ. ಆದ್ದರಿಂದ ಭೈರಾಪುರದ ಭಕ್ತರು ಬಂದು ಶಿವಪೂಜೆ ಮಾಡಿಕೊಂಡು ಹೋಗುತ್ತಾರೆ. ಈ ಶಿವನ ಅಥವಾ ಈಶ್ವರ ಗುಡಿಯನ್ನು ಹೊಸದಾಗಿ ಕಟ್ಟಿಸಿದ್ದಾರೆ. ಗುಡ್ಡದಹಳ್ಳಿ ಗಾಮದಲ್ಲಿ ವೀರಶೈವ ಜನಾಂಗದವರು ಇಲ್ಲವಾದ್ದರಿಂದ ಆ ದೇವರಿಗೆ ಪೂಜಿಸಲು ಬರಬಹುದು ಎನಿಸುತ್ತದೆ. ಆದರೂ ಸಹ ಮದುವೆ, ಹಬ್ಬ ಇತ್ಯಾದಿ ಸಂದರ್ಭಗಳಲ್ಲಿ ಗೊಲ್ಲ ಸಮುದಾಯದವರೇ ಈ ದೇವರಿಗೆ ಪೂಜೆಯನ್ನು ಮಾಡುತ್ತಾರೆ.

## ಬಳ್ಳಾರಿಯ ಮರಿಯೋಗಿ

ಮರಿಸ್ವಾಮಿಯ ಮೂಲಸ್ಥಾನವೇ ಬಳ್ಳಾರಿಗ್ರಾಮವೆಂದು ಇಲ್ಲಿನ ಅರ್ಚಕರು ಹಾಗೂ ಪುರಾಣದಲ್ಲಿ ಈ ಮರಿಸ್ವಾಮಿಯ ಹುಟ್ಟು, ಬೆಳವಣಿಗೆ ಪುರಾಣ ಇತ್ಯಾದಿ ಅಂಶಗಳನ್ನು ಒಳಗೊಂಡಿದೆ. ಆದ್ದರಿಂದ ಮರಿಸ್ವಾಮಿ ದೇವರ ಮೂಲ ಬಳ್ಳಾರಿ ಎಂದು ಹೇಳಬಹುದು. ಬಳ್ಳಾರಿಯಲ್ಲಿ ಮರಿಸ್ವಾಮಿ ತಾತನಮಠ ಬಹಳ ದೊಡ್ಡದು ಇದೆ. ಅಲ್ಲಿಂದ ಭೈರಾಪುರ ಗ್ರಾಮಕ್ಕೆ ಬಂದಿರಬಹುದು. ಏಕೆಂದರೆ ಭೈರಾಪುರದ ಜನರ ವ್ಯವಹಾರ ಕೇಂದ್ರ ಹಿಂದೆ ಬಳ್ಳಾರಿಯಲ್ಲಯೇ ವಹಿವಾಟು ಆದ್ದರಿಂದ ಈ ದೇವರ ಪ್ರತಿರೂಪವೇ ಈ ಭೈರಾಪುರದ ಮರಿಸ್ವಾಮಿ ದೇವರು. ಮರಿಸ್ವಾಮಿದೇವರು ಭೈರಾಪುರದಲ್ಲಿ ಬಂದು ನೆಲೆಸುವುದಕ್ಕೆ ಒಂದು ದಂತ ಕತೆಯಿದೆ. ಭೈರಾಪುರದ ಜನರು ಬಳ್ಳಾರಿ ನಗರಕ್ಕೆ ವ್ಯಾಪಾರ, ವ್ಯವಹಾರಕ್ಕೆ ಹೋಗುತ್ತಿದ್ದರಂತೆ ಭೈರಾಪುರದ ಜನರು ವ್ಯಾಪಾರ ಮುಗಿಸಿಕೊಂಡು ಬರುವಂತಹ ಸಂದರ್ಭದಲ್ಲಿ ಅವರ ಮೇಲೆ ಕಳ್ಳಕೋರರು ದರೋಡೆ ಮಾಡಲು ಬಂದರಂತೆ, ಅಂದರೆ ಇಂದಿನ ವ್ಯವಸ್ಥೆಯಲ್ಲಿ ಸಾರಿಗೆ ಬಸ್ಸು, ಲಾರಿ, ಜೀಪು ಈ ತರಹದ ಯಂತ್ರೋಪ ವಾಹನಗಳು ಇರಲಿಲ್ಲ. ಅಂತಹ ಸಂದರ್ಭದಲ್ಲಿ ಎತ್ತಿನ ಗಾಡಿಯಲ್ಲಿ ಬರುವಾಗ ಈ ರೀತಿಯ ದರೋಡೆ ನಡೆಸಿದಂತಹ ಸನ್ನಿವೇಶದಲ್ಲಿ ಮರಿಸ್ವಾಮಿ ದೇವರು ಅವರನ್ನು ಸದೆ ಬಡಿದು ಅವರಿಂದ ಪಾರಾಗಿ ಗಾಡಿಯಲ್ಲಿಯೇ ಭೈರಾಪುರ ಗ್ರಾಮಕ್ಕೆ ಬಂದು ನಲೆಸಿದ್ದಾರೆ. ಎಂಬ ಕತೆಯನ್ನು ಈ ಗ್ರಾಮದ ಹಿರಿಯರು ಹೇಳಿದ್ದಾರೆ.

ಈ ಬಳ್ಳಾರಿ ಮರಿಸ್ವಾಮಿಮಠದ ಇನ್ನೊಂದು ಆಪ್ತಶಾಖೆ ಬೆಂಗಳೂರಿನಲ್ಲಿದೆಯಂತೆ ಇದು ಸಹ ಈ ಮಠಕ್ಕೆ ಸಂಬಂದಿಸಿದಂತಹದ್ದೇ ಅಲ್ಲಿನ ಅರ್ಚಕರು ನೀವೇ ಬಂದು ಅರ್ಚಕರಾಗಿರೆಂದು ಕರೆದರು ಇವರಿಗೆ ದೂರವಾಗುವುದರಿಂದ ನೀವೇ ನೋಡಿಕೊಳ್ಳಿ ಎಂದು ಬಳ್ಳಾರಿಯ ಮರಿಸ್ವಾಮಿ ಅರ್ಚಕರು ಹೇಳಿದ್ದಾರೆ. ಆ

ದಿನದಿಂದಲೂ ಅವರೇ ನೋಡಿಕೊಳ್ಳುತ್ತಿರುವುದರಿಂದ ಇವರು ಆ ಕಡೆ ಅಂದರೆ ಬೆಂಗಳೂರಿಗೆ ಹೋಗುವುದೇ ಇಲ್ಲವಂತೆ, ಈ ರೀತಿಯ ಮರಿಸ್ವಾಮಿಯ ಅವತಾರಗಳು ಮೂರು ದಿಕ್ಕಿನಲ್ಲೂ ನೆಲೆಸಿದ್ದಾನೆ.

ಒಟ್ಟಾರೆ ಇತರೆ ದೈವಗಳಿಗೂ ಮತ್ತು ಮರಿಸ್ವಾಮಿ ದೇವರಿಗೂ ಇರುವಂತಹ ಸಂಬಂಧವನ್ನು ನೋಡಿದ್ದೇವೆ. ಇಲ್ಲಿ ಹಿಂದೂ–ಮುಸ್ಲಿಂ.ರ ಭಾಂದವ್ಯ ಗುಡ್ಡದಹಳ್ಳಿ – ಭೈರಾಪುರ ಗ್ರಾಮದ ಜನರ ನಡುವಿನ ಸಹೋದರ ಭಾಂದವ್ಯ ಈ ದೈವದ ವ್ಯಾಪ್ತಿಯನ್ನು ಮರಿಸ್ವಾಮಿ ದೇವರ ಸಂಬಂಧದಿಂದ ವಾತ್ಸಲ್ಯ ಪರಿಪಾಲನೆಯ ನಿಯಮ ತಿಳಿದು ಬರುತ್ತದೆ. ಈ ದೇವರ ಬಗ್ಗೆ ಕೇವಲ ಕೆಲವೇ ಊರಿನ ಜನರು ಪೂಜಿಸದೆ ಬೇರೆ ಬೇರೆ ಊರಿನಿಂದ ಬೇರೆ ಬೇರೆ ಜನಾಂಗದವರು ಬರುತ್ತಾರೆ. ಬಳ್ಳಾರಿಯಲ್ಲಿ ನಡೆಯುವ ಜಾತ್ರೆಗೂ – ಭೈರಾಪುರದಲ್ಲಿ ನಡೆಯುವ ಜಾತ್ರೆಗೂ ಆರು ತಿಂಗಳ ವ್ಯತ್ಯಾಸವನ್ನು ಕಾಣಬಹುದು. ಈ ದೈವಗಳ ಸಂಬಂಧ ಯಾವ ರೀತಿಯದ್ದು ಎಂಬುದನ್ನು ಈ ಮೇಲಿನ ದೈವಗಳ ಸಂಬಂಧದ ವಿಶ್ಲೇಷಣೆಯಲ್ಲಿ ಕಾಣಬಹುದಾಗಿದೆ.

# ಅಧ್ಯಾಯ: ಐದು

## ಆಚರಣೆಗಳು

ಜನಪದ ಸಂಸ್ಕೃತಿಗೆ ಆಚರಣೆಗಳೇ ಬೆನ್ನಲುಬು. ಆಚರಣೆಯಿಲ್ಲದೆ ಯಾವ ದೈವದ ಅಸ್ತಿತ್ವವು ಇಲ್ಲಿ ಸಾದ್ಯವಿಲ್ಲ. ಜನಪದ ಧರ್ಮ ಒಂದು ಬಗೆಯಲ್ಲಿ ಆಚರಣೆಯ ಧರ್ಮವೆನ್ನಬಹುದು. ದೇವತೆಗೂ ಸಮಾಜಕ್ಕೂ ಇರುವ ಸಂಬಂಧ ಅಭಿನಯಗೊಳ್ಳುವ ಕ್ರಮದ ವಿವರಣೆ ಆಚರಣೆಗಳು. "ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತಿಕ ಆಚರಣೆಗಳ ಮೊತ್ತವೇ ಆಚರಣೆ" ಎನ್ನಲಾಗಿದೆ. ನಂಬಿಕೆ ಆಚರಣೆಯ ಬೆನ್ನೆ ಲುಬು ನಂಬಿಕೆಯ ಸಿದ್ದಾಂತ ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ. ಆಚರಣೆ ಹುಟ್ಟುವುದಕ್ಕಿಂತ ಮುಂಚೆ ಅಥವಾ ನಂತರ ಪುರಾಣಗಳು ಹುಟ್ಟಿಕೊಳ್ಳುತ್ತವೆ. ಪುರಾಣ, ಕತೆಗಳು ಮರೆತು ಹೋದರು ಸಹ ಈ ಆಚರಣೆಗಳು ಮುಂದುವರೆಯುತ್ತವೆ.

ಆಚರಣೆಯನ್ನು ವಿವರಿಸುವಾಗ "ಮತ ಧರ್ಮಗಳಿಗೆ ಸಂಬಂಧಿಸಿದಂತೆ ಅಗೋಚರ ದೈವಶಕ್ತಿಗಳ ಪ್ರೀತ್ಯರ್ಥವಾಗಿ ಮಾನವ ನಡೆಸುತ್ತಾ ಬಂದಿರುವ ಮತಾಚಾರಗಳಿಗೆ, ಕರ್ಮವಿದಿಗಳಿಗೆ ಈ ಹೆಸರಿದೆ. ವಿದ್ವಾಂಸರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. "ಪುನರಾವರ್ತನೆ ಮತ್ತು ಸಾಮೂಹಿಕ ವೀಕ್ಷಣೆಯಿಂದ

ಸಂಪ್ರದಾಯಕವಾಗಿ ಒಪ್ಪಿತವಾಗಿರುವ, ಭೂತ, ವರ್ತಮಾನ, ಭವಿಷತ್ಕಾಲಗಳಿಗೆ ಸಂಬಂಧಿಸಿದಂತೆ ಕಾರ್ಯಕಾರಣ ಸಂಬಂಧವನ್ನು ಸೂಚಿಸುವ ಕಲ್ಪನೆಯನ್ನೇ "ನಂಬಿಕೆ ಎಂದು ಕರೆಯಬಹುದು. ಒಂದು ವರ್ಗ ಪರಂಪರಾಗತವಾಗಿ ಒಪ್ಪಿರುವ ಮಾನವನ ಕ್ರಿಯಾವಿನ್ಯಾಸವನ್ನು ಸಂಪ್ರದಾಯ ಎಂದು ಕರೆಯಬಹುದು. ಸಂಪ್ರದಾಯ ವೈಯಕ್ತಿಕವಾದುದಲ್ಲ. ಸಾಮೂಹಿಕವಾದದ್ದು. ಜನರು ಏನು ಮಾಡಬೇಕೆಂದು ತಿಳಿಸುವುದ್ಯ ಸಂಪ್ರದಾಯ ಏಕೆ ಅದನ್ನು ಮಾಡಬೇಕೆಂದು ತಿಳಿದಿದ್ದಾರೋ ಅದೇ ನಂಬಿಕೆ. ಸಮ್ಮಯ ಹಿತರಕ್ಷಣೆಗಾಗಿ, ಸಾಮಾನ್ಯವಾಗಿ ವರ್ಷಕ್ಕೊಂದು ಸಲ ವಿಶೇಷ ಸಂದರ್ಭಗಳಲ್ಲಿ ಆಚರಿಸುವ ಸಂಪ್ರದಾಯ, ಆಚರಣೆಗಳನ್ನು ಒಳಗೊಂಡ ಸಂಕೀರ್ಣ ಸ್ವರೂಪವನ್ನೇ ಹಬ್ಬ ಎಂದು ಕರೆಯಬಹುದು. ಸಂಪ್ರದಾಯ ಹಬ್ಬ ಆಚರಣೆ ಈ ಮೂರಕ್ಕೂ ನಂಬಿಕೆಯೇ ಜೀವಧಾತು.

ಗ್ರಾಮದೇವತೆಗಳನ್ನು ಅಧ್ಯಯನ ಮಾಡುವಾಗ ಆಚರಣೆಗಳೇ ಆಧಾರ. ಆಚರಣೆಗಳು ಸಾಮೂಹಿಕವಾದರೆ, ಹರಕೆ ವೈಯಕ್ತಿಕವಾದುದು. ಹರಕೆ ಬಹಳ ಸಲ ಆಚರಣೆ ರೂಪದಲ್ಲೆ ನಡೆಯುತ್ತದೆ. ಉದಾ: ಕೊಂಡ ಹಾಯುವದು, ಸಿಡಿ ಆಡುವದು, ಒಂದು ಜನಾಂಗದ ಜೀವನ ವಿಧಾನದ ಬೇಡಿಕೆಯ ಅಂಗವಾಗಿ ಆಚರಣೆ ರೂಪಪಡೆಯುತ್ತದೆ. ಆಚರಣೆಗಳು ವಿಶೇಷ ಸಂದರ್ಭಗಳಲ್ಲಿ ಆಚರಿಸಲ್ಪಟ್ಟಾಗ ಹಬ್ಬಗಳೆನಿಸಿಕೊಳ್ಳುತ್ತವೆ. ಈ ಹಬ್ಬಗಳಿಗೆ ವ್ಯಾಪಾರ ವಾಣಿಜ್ಯದ ವ್ಯಾಪಾರದ ಸ್ಪರ್ಶವಾದಾಗ ಅವಕ್ಕೆ ಜಾತ್ರೆಯ ಸ್ವರೂಪ ಬರುತ್ತದೆ. ಜಾತ್ರೆಗಳು ಪ್ರಾರಂಭದಲ್ಲಿ ಪುಣ್ಯಕ್ಷೇತ್ರಗಳಲ್ಲಿ ನಡೆಯುತ್ತಿದ್ದು, ನಂತರ ಸ್ಥಳೀಯವಾದವೆಂಬ ಅಭಿಪ್ರಾಯ. ಪಾಪ ಪರಿಹಾರಕ್ಕಾಗಿ ದೇಶದ ಮೂಲೆಮೂಲೆಗಳಿಂದ ಜನ ಅಂಥ ಕ್ಷೇತ್ರದಲ್ಲಿ ಅಪಾರ ಸಂಖ್ಯೆಯಲ್ಲಿ ನೆರೆಯುತ್ತಿದ್ದರು. ಆ ನಂತರ ಹಳ್ಳಿಗಳಲ್ಲಿ ನಿಯತ ಅಥಾವಾ ಅನಿಯತ ಕಾಲಗಳಲ್ಲಿ ಅದ್ದೂರಿಂದ ಜರುಗುತ್ತಿದ್ದ ದೊಡ್ಡ ಹಬ್ಬಗಳಲ್ಲಿ ನೆಂಟರಿಷ್ಟರ ಜೊತೆಗೆ ಶ್ರದ್ಧಾವಂತ ಭಕ್ತರು ಬರಲಾರಂಭಿಸಿದರು. ಒಂದು ದಿನದ ಹಬ್ಬ ಮೂರು ಅಥವಾ ಹೆಚ್ಚು ದಿನಗಳಿಗೆ ಹಬ್ಬುತ್ತಾ ಹೋಯ್ತು ಕುಣಿತ ಮರೆತಗಳು ಕೂಡಿಕೊಂಡು ಮದ್ದು ಪಟಾಕಿಗಳ ವೈಭವ ಆಕರ್ಷಕವಾಗಿ ಅಂಗಡಿ ಮುಗ್ಗಟ್ಟುಗಳು ಜಮಾಯಿಸಿ, ಜನಮರುಳಾಗಿ ಪರುಷೆ ಸೇರಿದಾಗ ಅದು ಜಾತ್ರೆ ಎಂಬ ನಾಮಕರಣಕ್ಕೆ ಯೋಗ್ಯವಾಯಿತು. ಧಾರ್ಮಿಕ ಸ್ವರೂಪದ ಹಬ್ಬ ಕಾಲಕ್ರಮೇಣ ಸಾಂಸ್ಕೃತಿಕ ಮಹತ್ವವನ್ನು ಪಡೆದು ಕೊನೆಗೆ ವಾಣಿಜ್ಯ ಮುಖವನ್ನು ರೂಪಿಸಿಕೊಂಡಾಗ ಜಾತ್ರೆಯಾಯಿತು. (ಡಾ. ದೇ. ಆವರೇಗೌಡ : ಜಾನಪದ ಅಧ್ಯಯನ ಪು.೩೪೨)

ಹಬ್ಬದ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಗ್ರಾಮದೇವತೆಯ ಅಧ್ಯಯನಕ್ಕೆ ತುಂಬಾ ಸಹಕಾರಿಯಾಗುತ್ತದೆ. ಭಯಭಕ್ತಿಂದಲೂ ಅಪಾರವಾದ ತೊಡಗುವಿಕೆಂದಲೂ ಭಕ್ತರು ಈ ಆಚರಣೆಗಳನ್ನು ನಿರ್ವಹಿಸುತ್ತಾರೆ. ಇವರಿಗೆ ಒಂದೊಂದು ಆಚರಣೆಯೂ ಜೀವಂತ ಅರ್ಥಪೂರ್ಣ. ಹೀಗೆ ಮಾಡದಿದ್ದರೆ ಕಂಟಕಗಳು ಆರಂಭವಾಗುತ್ತವೆ. ಎಂಬ ನಂಬಿಕೆ ಇರುವುದರಿಂದ ಆಚರಣೆಗಳನ್ನು ನಿಲ್ಲಿಸುವ ಪ್ರಶ್ನೆಯೆ ಹುಟ್ಟುವುದಿಲ್ಲ. ಮುಂದೆ ಗ್ರಾಮದೇವತೆಗೆ ಸಂಬಂಧಿಸಿದ ಆಚರಣೆ, ಹರಕೆಗಳನ್ನು ಅವುಗಳು ಆಚರಿಸಲ್ಪಡುವ ಅನುಕ್ರಮಣಿಕೆಯಲ್ಲಿಯೇ ಪರಿಶೀಲಿಸಬಹುದು.

"ತಲಾತಲಾಂತರದಿಂದ ಸಮುದಾಯದ ಅಂಗಿಕಾರವನ್ನು ಪಡೆದು ಬಳಕೆಯಲ್ಲಿರುವ ಮಾಟ ಮತ್ತು ಧಾರ್ಮಿಕ ವಿಧಿಗಳೇ ಜನಪದ ಆಚರಣೆಗಳು" ಒಬ್ಬ ವ್ಯಕ್ತಿ ಇಷ್ಟಪಟ್ಟು ಒಂದು ಆಚರಣೆಯನ್ನು ಸೃಮಾಡಲು ಸಾಧ್ಯವಿಲ್ಲ. ಒಂದು ಜನಾಂಗದ ಜೀವನ ವಿಧಾನದ ಬೇಡಿಕೆಯ ಅಂಗವಾಗಿ ಆಚರಣೆ ರೂಪ ಪಡೆಯುತ್ತದೆ. ಪ್ರಕೃತಿಯಲ್ಲಿ ಮತ್ತು ಮಾನವನ ದೇಹದಲ್ಲಿ ಉಂಟಾಗುವ ಬದಲಾವಣೆಗಳನ್ನು ಆಚರಣೆಗಳ ಮೂಲಕ ಗುರುತಿಸಲಾಗುತ್ತಿದೆ. ಮಾನವನ ಬದುಕಿಗೆ ಮತ್ತು ಅವನ ಭಾವ ಪ್ರಪಂಚಕ್ಕೆ ಸಂಬಂಧಿಸಿದ ಆಚರಣೆಗಳು ನೈಸರ್ಗಿಕ ಕ್ರಿಯೆಗಳಿಗೆ ಸಂಬಂಧಿಸಿದ ಕ್ರಿಯೆಗಳು ಆರ್ಥಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಹಾಗೂ ಸಾಮಾಜಿಕ ರಚನೆಗಳಿಗೆ ಆಚರಣೆಗಳೆಂದು ಇವನ್ನು ಸ್ಥೂಲವಾಗಿ ವಿಂಗಡಿಸಬಹುದು.

ದೈವಸಂಬಂಧದ ಆಚರಣೆಗಳ ಜನಪದ ಬದುಕಿನ ಹೆಚ್ಚು ಭಾಗವನ್ನು ಆಕ್ರಮಿಸಿವೆ. ದಿನಕ್ಕೊಮ್ಮೆ, ವಾರಕ್ಕೊಮ್ಮೆ ತಿಂಗಳಿಗೊಮ್ಮೆ ದೇವರ ಆರಾಧನೆ ನಡೆಯುತ್ತದೆ. ಸಕಲ ಪೂರ್ವಸಿದ್ಧತೆಯೊಂದಿಗೆ ಆಗುವ ಹಬ್ಬಗಳು ಅನೇಕ ಆಚರಣೆಗಳ ಮೊತ್ತವಾಗಿದೆ. ಮನುಷ್ಯರಿಗೆ ದೇವರು ಪ್ರಕೃತಿಯ ಮೇಲಿನ ಭಯದಿಂದಾಗಿ ಅವುಗಳ ಮೇಲಿನ ಭಕ್ತಿ ಭಾವವನ್ನು ಬೆಳೆಸಿಕೊಳ್ಳುತ್ತಾರೆ. ಈ ದೇವರ ಮೇಲಿನ ನಂಬಿಕೆಯೇ ಮನುಷ್ಯರನ್ನು ಆಚರಣೆ ಮಾಡಲು ತೊಡಗಿಸುತ್ತಾರೆ. ಆಚರಣೆಗಳನ್ನು ಮಾಡಿಕೊಂಡು ಬರುವುದರಿಂದ ನಮಗೆ ಬಂದ ಕಷ್ಟಗಳು ಪರಿಹಾರವಾಗುವುದು. ಮಾನಸಿಕ ನೆಮ್ಮದಿಯು ದೊರೆಯುವುದು ಎನುವುದು ಜನರಲ್ಲಿ ನಂಬಿಕೆಯಾಗಿದೆ. ಅಂದರೆ ನಂಬಿಕುಂದಲೇ ಆಚರಣೆಗಳು ಇರುವುದರಿಂದ ಸಂಪ್ರದಾಯಗಳು ಜೀವಂತವಾಗಿವೆ. ಭೌಗೋಳಿಕ, ಜನಾಂಗಿಕ ಹಾಗೂ ಸಾಸ್ಕೃತಿಕ ವಾತಾವರಣದ ಹಿನ್ನೆಲೆಯಲ್ಲಿ ಇಂದಿಗೂ ಆಚರಣೆಗಳು ಹುಟ್ಟಿಕೊಂಡಿವೆ. ಆದರೆ ಭೌಗೋಳಿಕ ಪ್ರದೇಶಕ್ಕೆ ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಪಡೆಯುತ್ತವೆ ವಿನಃ ಯಾವುದೇ ಆಚರಣೆಯಾಗಲಿ ನಶಿಸಿಹೋಗುವುದಿಲ್ಲ. ಆಚರಣೆಗಳಲ್ಲಿ ವಾರ್ಕಾವರ್ತನ ಆಚರಣೆ ಮತ್ತು ಜೀವನಾವರ್ತನ ಆಚರಣೆಗಳೆಂದು ಎರಡು ರೀತಿಯಲ್ಲಿ ವರ್ಗಿಕರಿಸುತ್ತಾರೆ,

ಒಂದು ವರ್ಷದಲ್ಲಿ ಆಚರಿಸುವಂತಹ ಆಚರಣೆಗಳನ್ನು ವಾರ್ಕಾವರ್ತನ ಆಚರಣೆಗಳೆಂದು, ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗೂ ಅವನಿಗೆ ಸಂಬಂಧಿಸಿದಂತೆ ಮಾಡುವ ಅಥವಾ ಆಚರಿಸುವ ಆಚರಣೆಗಳನ್ನು ಜೀವನಾರ್ತನ ಆಚರಣೆಗಳೆಂದು ಕರೆಯುತ್ತೇವೆ. ಹಬ್ಬ, ಹರಿದಿನ, ಜಾತ್ರೆ ತೇರು, ಇತ್ಯಾದಿ ಜೀವನಾವರ್ತನ ಆಚರಣೆಗಳಾಗಿವೆ.

## ೧. ಜೀವನಾವರ್ತನ ಆಚರಣೆಗಳು

ಶ್ರೀಮರಿಸ್ವಾಮಿ ದೇವರ ಆಶೀರ್ವಾದ ಪಡೆದು ಸಂತಸರಾದ ಅಥವಾ ಮನೆದೇವರು ಶ್ರೀ ಮರಿಸ್ವಾಮಿ ದೇವಸ್ಥಾನದ ಸನ್ನಿಧಿಗೆ ಮದುವೆಯ ಸಂದರ್ಭದಲ್ಲಿ ದೇವರಿಗೆ ಹರಕೆಯನ್ನು ಸಲ್ಲಿಸುತ್ತಾರೆ. ಪೂಜಾ ವಿಧಾನಗಳ ಜೊತೆಗೆ ಧವಸ ಧಾನ್ಯಗಳನ್ನಿಟ್ಟು ವಾದ್ಯದವರೊಂದಿಗೆ ಮುತ್ತೈದೆಯರ ಕಳಸ, ತುಂಬಿದ ನೀರಿನ ಕೊಡ, ಪೂಜಾಸಾಮಗ್ರಿಗಳೊಂದಿಗೆ ಶ್ರೀ ಮರಿಸ್ಬವಾಮಿ ದೇವರ ದೇವಸ್ಥಾನಕ್ಕೆ ಹೋಗುತ್ತಾರೆ. ಕಾ

ಕರ್ಪೂರ, ಹೂ, ಹಣ್ಣುಗಳನ್ನು ಕೊಟ್ಟು ಪೂಜೆ ಮಾಡಿಸಿ ಮಂಗಳಾರತಿ ತೆಗೆದುಕೊಂಡು ತೀರ್ಥ ಪ್ರಸಾದ ಪಡೆದು ತಮ್ಮನ್ನು ಉದ್ಧರಿಸೆಂದು ದೀರ್ಘದಂಡ ಪ್ರಣಾಮಗಳನ್ನು ಸಲ್ಲಿಸುತ್ತಾ ಮನೆಗೆ ಹಿಂದಿರುಗುತ್ತಾರೆ. ಯಾವುದೇ ಮನೆಯಲ್ಲಿ ಅಥವಾ ಸಮುದಾಯದಲ್ಲಿ ಮಂಗಳಕಾರ್ಯ ನಡೆದರೆ ಮೊದಲಿಗೆ ಪೂಜೆ ಸಲ್ಲಿಸಿ ಕಾರ್ಯವನ್ನು ಮಾಡುತ್ತಾರೆ. ಯಾವುದಾದರೊಂದು ಸಂಕಷ್ಟದ ಪರಿಸ್ಥಿತಿಯಲ್ಲಿ ಅಪಾಯದ ಸಂದರ್ಭದಲ್ಲಿ ಮಾನವ ದೇವರ ಮೋರೆಹೋಗುವುದನ್ನು ವೀಕ್ಷಿಸಬಹುದು. ಅಂಥವರು ದೇವರಿಗೆ ಹರಕೆಯನ್ನು ಹೋರುತ್ತಾರೆ. ಅವರು ಒಂದು ಒಳ್ಳೆಯ ಸಂದರ್ಭದಲ್ಲಿ ಅಥವಾ ಜಾತ್ರೆಯ ಸಂದರ್ಭದಲ್ಲಿ ಹರಕೆಯನ್ನು ತೀರಿಸುತ್ತಾರೆ. ಅಂತಹ ಸಮಯ ಸಂದರ್ಭವನ್ನು ಈ ಕೆಳಗಿನ ಹಂತಗಳಲ್ಲಿ ನೋಡಬಹುದಾಗಿದೆ.

## ಜನನ

ಮರಿಸ್ವಾಮಿದೇವರ ಆಶೀರ್ವಾದದಿಂದ ಭಕ್ತರ ಕೋರಿಕೆಯಂತೆ ಗಂಡು ಮಗು ಜನನವಾದರೆ ಮೊದಲಿಗೆ ಆ ಮಗುವಿಗೆ ಶ್ರೀಮರಿಸ್ವಾಮಿದೇವರ ಹೆಸರನ್ನು ಕರೆಯುವುದು. ಜನರ ನಂಬಿಕೆಯಾಗಿದೆ. ಬಾಣಂತಿಯರು ಶ್ರೀ ಮರಿಸ್ವಾಮಿದೇವರ ಸನ್ನಿದಿಗೆ ಹೋಗಿ ಪೂಜೆ ಮಾಡಿಸಿ ತೀರ್ಥ ನೀರು ಹಾಕುವವರೆಗೂ ಅವರು ಮಾಂಸಾಹಾರವನ್ನು ಸೇವಿಸುವಂತಿಲ್ಲ. ಒಂದು ವೇಳೆ ಮಾಡಿದರೆ ನಮಗೆ ಒಳ್ಳೆಯದಾಗುವುದಿಲ್ಲವೆಂದು ಜನರ ನಂಬಿಕೆಯಾಗಿದೆ. ಮಗುವು ಮೂರು ತಿಂಗಳು ತುಂಬುವತನಕ ಮಾಂಸಾಹಾರ ಸೇವಿಸುವಂತಿಲ್ಲ ಎಂದು ಇಂದಿಗೂ ಈ ಆಚರಣೆಯನ್ನು ಈ ಪ್ರಾದೇಶಿಕತೆಯಲ್ಲಿ ಕಾಣಬಹುದಾಗಿದೆ. ಮಗು ಜನನವಾದ ಸುಮಾರು ಮೂರು ತಿಂಗಳ ನಂತರ ದೇವಸ್ಥಾನಕ್ಕೆ ಹೋಗಿ ಮಗುವನ್ನು ಅಡ್ಡಗೆಡವಿ ಶ್ರೀ ಮರಿಸ್ವಾಮಿದೇವರಿಗೆ ಪೂಜೆ ಮಾಡಿಸಿ ಮಂಡಕ್ಕಿ, ಸಕ್ಕರೆ, ಕಾು, ಹಣ್ಣುಗಳನ್ನು ಮಕ್ಕಳಿಗೆ, ಹಿರಿಯರಿಗೆ, ಪ್ರಸಾದ ರೀತಿಯಲ್ಲಿ ಹಂಚಿ ಮನೆಗೆ ಬರುತ್ತಾರೆ. ಸ್ತ್ರೀ ಗರ್ಭಧರಿಸಿದಂತಹ ಸಂದರ್ಭದಲ್ಲಿ ನನಗೆ ಗಂಡು ಮಗುವಾದರೆ ನಿನ್ನ ಗುಡಿಗೆ ಬಂದು ಹರಕೆಯನ್ನು ಸಲ್ಲಿಸುತ್ತೇನೆಂದು ಮುಡುಪು ಕಟ್ಟಿಕೊಂಡಿರುತ್ತಾರೆ. ಒಂದು ವೇಳೆ ಆ ಮುಡುಪನ್ನು ಸಲ್ಲಿಸದೇ ಇದ್ದರೆ ನನಗಾಗಲಿ ನನ್ನ ಮಗುವಿಗಾಗಲಿ ಏನಾದರೂ ಆಪತ್ತು ಬರುತ್ತದೆ ಎಂಬ ನಂಬಿಕೆ ಈಗಲೂ ಸಹ ಕಾಣಬಹುದು. ಮಗುವಿಗೆ ಹಾಲು ಆಗದೇ ಇದ್ದಂತಹ ಸಂದರ್ಭದಲ್ಲಿ ದೇವರ ಹೆಸರನ್ನೇಳಿ ಮುಡುಪನ್ನು ಕಟ್ಟುವುದು ನಂತರ ಮಗುವು ದಷ್ಟಪುಷ್ಟವಾಗಿ ಬೆಳೆದ ನಂತರ ಹರಕೆಯನ್ನು ದೇವಸ್ಥಾನಕ್ಕೆ ಹೋಗಿ ಒಪ್ಪಿಸುವುದು, ಇದು ಹಣದ ರೂಪದಲ್ಲಿರಬಹುದು ಇಲ್ಲವೇ ಆಭರಣ ರೂಪದಲ್ಲಿರಬಹುದು ಅಥವಾ ಜೋಡುಕಾು ಹೊಡೆಸುವುದು. ಇತ್ಯಾದಿ ರೂಪದಲ್ಲಾದರೂ ಇರಬಹುದು. ಅದು ಅವರ ಯೋಗ್ಯತೆಗೆ ತಕ್ಕಂತೆ ಅವರು ಹರಕೆಗಳನ್ನು ಸಲ್ಲಿಸುತ್ತಾರೆ. ಗಂಡು ಮಗುವಾದರೆ ಕೆಲವರು ದೊಡ್ಡಮೊತ್ತದ (ಉಡುಗೊರೆ) ಹರಕೆ ಸಲ್ಲಿಸುತ್ತಾರೆ. ಉದಾ: ಭೈರಾಪುರದ ಬಜ್ಜಣ್ಣ ಅರ್ಧ ಕೆ.ಜಿ. ಬೆಳ್ಳಿಯ ವಿಗ್ರಹ ಮಾಡಿಸಿರುವುದು.

## ನಾಮಕರಣ

ಮರಿಸ್ವಾಮಿದೇವರ ಭಕ್ತರು ಮಗುವಿಗೆ ನಾಮಕರಣ ಮಾಡುವಂತಹ ಸಂದರ್ಭದಲ್ಲಿ ದೇವರಿಗೆ ಮೊದಲು ಪೂಜೆ ಮಾಡಿಸಿ ನಂತರ ನಾಮಕರಣ ಮಾಡುವಂತದ್ದು ಅದರಲ್ಲೂ ವೀರಶೈವ ಮತ್ತು ಮಾದಿಗ ಸಮುದಾಯದಲ್ಲಿ ಈ ರೀತಿಯ ಆಚರಣೆಗಳನ್ನು ಮಾಡುತ್ತಾರೆ. ಗೊಲ್ಲಸಮುದಾಯದವರು ಸಹ ಈ

ರೀತಿಯ ಆಚರಣೆಗಳನ್ನು ಮಾಡುತ್ತಾರೆ. ವಿಶೇಷವಾಗಿ ಭೈರಾಪುರದಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿರುವ ಗುಡ್ಡದಹಳ್ಳಿ ಗ್ರಾಮದ ಮಾದಿಗ ಸಮುದಾಯದ ಕುರೇಶಪ್ಪ ವಂಶಸ್ಥರು ಇಂದಿಗೂ ನಾಮಕರಣದ ಸಂದರ್ಭದಲ್ಲಿ ದೇವರ ಸನ್ನಿದಿಗೆ ಬಂದು ತೀರ್ಥದ ನೀರು ಮಗುವಿನ ಮೇಲೆ ಹಾಕಿಸಿಕೊಂಡು ಪೂಜೆ ಮಾಡಿಸಿ ಮನೆಗೆ ಹೋಗಿ ನಾಮಕರಣ ಮಾಡುತ್ತಾರೆ. ಅದು ಮೊದಲಿಗೆ ಆ ದೇವರ ಹೆಸರಿನ್ನೇ ಕರೆಯುತ್ತಾರೆ. ( ಮರಿಸ್ವಾಮಿ) ಈಗಲೂ ಅವರ ವಂಶಸ್ಥರಲ್ಲಿ ಮರಿಸ್ವಾಮಿ ಎಂಬ ನಾಮಕರಣ ಪ್ರಾಪ್ತಗೊಂಡಿರುವುದು ಬಹಳಷ್ಟು ಜನರಿದ್ದಾರೆ. ಅದೇ ಸಮುದಾಯದ ಭೈರಾಪುರದಲ್ಲಿ ಇದೇ ರೀತಿಯ ಆಚರಣೆಗಳನ್ನು ಮಾಡುತ್ತಾರೆ. ಕೆಲವು ಸಮುದಾಯದ ಭಕ್ತರು ಸಹ ಆ ದೇವರಿಂದ ಫಲಾಪೇಕ್ಷೆ ಹೊಂದಿದವರು ಮರಿಸ್ವಾಮಿ ಎಂತಲೂ ನಾಮಕರಣ ಮಾಡಿಕೊಂಡಿದ್ದಾರೆ. ಈ ದೇವರು ಸುಮಾರು ಮೂರು, ನಾಲ್ಕು ಹಳ್ಳಿಗಳಿಗೆ ಆರಾಧ್ಯದೇವರಾಗಿ ಒಳ್ಳೆಯ ಮಹತ್ವದ ಸ್ಥಾನ ಪಡೆದಿದೆ.

## ಜವಳಿ ಕಾರ್ಯಕ್ರಮ

ಹುಟ್ಟಿದ ಮಗುವಿಗೆ ಸುಮಾರು ಒಂದು ವರ್ಷ ತುಂಬುವುದರೊಳಗಾಗಿ ಇಲ್ಲವೇ ಮೂರು ಇಲ್ಲವೇ ಐದು ವರ್ಷಗಳು ತುಂಬುವುದರೊಳಗಾಗಿ ಜವಳಿಕಾರ್ಯವನ್ನು ಮಾಡುವುದುಂಟು. ಈ ಕಾರ್ಯಕ್ರಮವನ್ನು ಮಾಡುವಂತಹ ಸಂದರ್ಭದಲ್ಲಿ ಎಲ್ಲಾ ಬಂದುಬಳಗದವರನ್ನು ಬರಮಾಡಿಕೊಂಡು ದೇವಸ್ಥಾನಕ್ಕೆ ವಿಶೇಷ ಪೂಜೆ ಸಲ್ಲಿಸಲು ದೇವಸ್ಥಾನಕ್ಕೆ ತೆರಳುವುದು ಹೆಚ್ಚಾಗಿ ವೀರಶೈವ ಸಮುದಾಯದಲ್ಲಿ ಕಾಣಬಹುದು. ಪೂಜೆ ಮಾಡಿಸಿ ತೀರ್ಥ ನೀರನ್ನು ಹಾಕಿಸಿದ ನಂತರ ಅರ್ಚಕರಿಂದ ಎಲೆಗತ್ರಿ ಹಾಕಿಸುತ್ತಾರೆ. ಅಂದರೆ ವೀಳ್ಯಾದೆಲೆಯನ್ನು ಕತ್ತರಿಯ ರೀತಿಯಲ್ಲಿ ಮಾಡಿ ಅರ್ಚಕರು ಮಗುವಿನ ಕೂದಲನ್ನು ಎಡಗೈಲಿ ಹಿಡಿದು ಬಲಗೈಲಿ ವೀಳ್ಯಾದೆಲೆಯ ಕತ್ರಿಯಿಂದ ಶಾಸ್ತ್ರ ಪ್ರಕಾರವಾಗಿ ಕತ್ತರಿಸುವ ನೆಪಮಾಡುತ್ತಾರೆ. ಇದಾದ ನಂತರ ಭಕ್ತಾದಿಗಳಿಗೆ ಅನ್ನದಾಸೋಹ ಮಾಡಿಸುತ್ತಾರೆ. ಹಿಂದಿರುಗಿ ಮನೆಗೆ ಬಂದಂತಹ ಸಂದರ್ಭದಲ್ಲಿ ಮಗುವಿನ ಸಹೋದರಮಾವನಿಂದ ಕೂದಲನ್ನು ಕತ್ತರಿಯಿಂದ ಕತ್ತರಿಸುತ್ತಾರೆ. ಆ ಕತ್ತರಿಸುವಂತ ಸಂದರ್ಭದಲ್ಲಿ ಸೋದರಮಾವನಿಗೆ ಪೂಜೆಯ ಸಾಮಗ್ರಿಗಳಾದ ಎಲೆ, ಅಡಿಕೆ, ಅಕ್ಕಿ, ಬೆಲ್ಲ, ದಕ್ಷಿಣೆ (ಉಲುಪಿ) ಇಟ್ಟು ಕಾರ್ಯಕ್ರಮ ಮುಗಿಸುತ್ತಾರೆ. ಕತ್ತರಿಸುವಂತಹ ಕೂದಲನ್ನು ಒಂದು ಬಟ್ಟೆಯಲ್ಲಿಟ್ಟುಕೊಂಡು ಹೋಗಿ ಕೂದಲನ್ನು ಗಂಗೆಗೆ ಬಿಡುತ್ತಾರೆ. ಆ ದಿನದಂದು ಮಗುವಿಗೆ ಹೊಸಬಟ್ಟೆ ತಂದೆ ತಾಯಿಗಳು ಸಹ ಹೊಸ ಬಟ್ಟೆಗಳನ್ನು ಧರಿಸುತ್ತಾರೆ. ಬಂಧುಗಳು ಮಗುವಿಗೆ ಹಣ, ಬಟ್ಟೆ, ವಸ್ತು, ಆಭರಣ, ಮುಂತಾದ ರೀತಿಯಲ್ಲಿ ಮ್ಯು ಮಾಡಿ ಸಂತೋಷವಾಗಿ ವಿಧ ವಿಧವಾಗಿ ಮಾಡಿದ ಸಿಹಿ ಅಡಿಗೆಯನ್ನು ಊಟಮಾಡಿ ಮುಗಿಸುತ್ತಾರೆ. ಈ ರೀತಿಯ ಕಾರ್ಯಕ್ರಮಗಳನ್ನು ಈ ಗ್ರಾಮದಲ್ಲಿ ವೀರಶೈವರು ಮತ್ತು ಮಾದಿಗರ ಸಮುದಾಯದಲ್ಲಿ ಮಾಡುತ್ತಾರೆ.

## ಪುಷ್ಪವತಿ

ಹೆಣ್ಣುಮಕ್ಕಳಿಗೆ ಪುಷ್ಪವತಿ ಎಂಬುದು ಜೀವನದ ಎರಡನೆಯ ಹಂತವಾಗಿದೆ. ಅಂದರೆ ವಿವಾಹಕ್ಕೆ ಅರ್ಹಳಾದವಳು ಎಂದರ್ಥ. ಆ ದಿನದಂದು ಅವಳ ಸಹೋದರ ಅತ್ತೆಯಿಂದ ಹಾಲು, ತುಪ್ಪ ಹಾಕಿ ತೆಲೆಸ್ನಾನ

ಮಾಡಿಸಿ ಸಾಯಾಂಕಾಲ ಕುಳ್ಳಿರಿಸಿ ವಠಾರದಲ್ಲಿನ ಮುತ್ತೈದೆಯರು ಸೇರಿ ಆರತಿ ಮಾಡುವುದು ಸೋಭಾನದ ಪದಗಳನ್ನು ಹಾಡುವುದು. ಋತುಮತಿಯಾದ ಒಂಭತ್ತು ಇಲ್ಲವೆ ಹದಿಮೂರನೆ ದಿವಸದಲ್ಲಿ ಆ ಹೆಣ್ಣು ಮಗಳನ್ನು ತಲೆ ಸ್ನಾನ ಮಾಡಿಸಿ, ದೇವಸ್ಥಾನಕ್ಕೆ ಹೋಗಿ ದೇವರಿಗೆ ವಿಶೇಷ ಪೂಜೆ ಸಲ್ಲಿಸಿ, ತನಗೆ ಬೇಗ ಮದುವೆ ಆಗಲಿ ಒಳ್ಳೆಯ ಗಂಡ ಲಬಿಸಲಿ ಎಂದು ಆ ದೇವರಲ್ಲಿ ಬೇಡಿಕೊಳ್ಳುತ್ತಾಳೆ. ನಂತರ ಬಂದುಗಳೆಲ್ಲರೂ ಸೇರಿ ಹೊಸ ಬಟ್ಟೆ, ಆಭರಣಗಳನ್ನು ಕಾಣಿಕೆ ರೂಪದಲ್ಲಿ ನೀಡುತ್ತಾರೆ. ಎಲ್ಲರೂ ಸೇರಿ ಸಿಹಿಯಾದ ಊಟ ಮಾಡಿ ಸಂತೋಷದಿಂದ ಕಾರ್ಯಕ್ರಮವನ್ನು ಮುಗಿಸುತ್ತಾರೆ. ಋತುಮತಿಯಾದ ದಿವಸವು (ಸಮಯವು) ಒಳ್ಳೆಯದಾಗಿದ್ದರೆ ಸರಿ, ಸಮಯ ಒಳ್ಳೆಯದಿಲ್ಲದಿದ್ದಲ್ಲಿ ಅದಕ್ಕೆ ದೇವರಿಗೆ ಶಾಂತಿ ಮಾಡಿಸುತ್ತಾರೆ.

ಯಾವುದೇ ಸಣದರ್ಭದಲ್ಲಿ ಹೊಲದಲ್ಲಿ ಬೀಜಗಳನ್ನು ಬಿತ್ತುವಾಗ ಮರಿಸ್ವಾಮಿದೇವರ ಗುಡಿಗೆ ಬಂದು ಅಲ್ಲಿ ಮೂರು ಗುಂಪಾಗಿ ಬೀಜವನ್ನು ಇಟ್ಟು ಮೂರರಲ್ಲಿ ಸ್ವಲ್ಪ ಸ್ವಲ್ಪ ತೆಗೆದುಕೊಂಡು ಉಳಿದ ಬೀಜಗಳಲ್ಲಿ ಬೆರೆಸಿಕೊಂಡು ಬಿತ್ತನೆ ಮಾಡುತ್ತಾರೆ. ಬೆಳೆಯು ಒಳ್ಳೆಯ ರೀತಿಯಲ್ಲಿ ಬಂದರೆ ದೇವರಿಗೆ ಇಷ್ಟು ಪಾಲು ಕೊಡುವುದಾಗಿ ಹರಕೆ ಹೋರುವುದು. ಪೈರಿಗೆ ರೋಗ ತಗಲಿದಾಗ ದೇವರ ಮೊರೆಯನ್ನು ಹೋಗುವುದು ದೇವರಿಂದ ತೀರ್ಥದ ನೀರನ್ನು ಹಾಗೂ ಬೂದಿಯನ್ನು (ಆಧಾರದ)ಪೈರಿನ ಮೇಲೆ ಎರಚಿದರೆ ರೋಗ ನಿವಾರಣೆಯಾಗುತ್ತದೆ. ಎಂಬ ನಂಬಿಕೆ ರೈತರಲ್ಲಿದೆ. ಆದ್ದರಿಂದ ಜನರು ಈ ರೀತಿಯ ಆಚರಣೆಗಳನ್ನು ಮಾಡುತ್ತಾರೆ.

## ಮದುವೆ

ಆಶ್ರಮಗಳಲ್ಲಿ ಎರಡನೆ ಆಶ್ರಮವಾಗಿರುವಂತಹ ಗೃಹಸ್ಥಾಶ್ರಮ. ಹಾಗೂ ಜೀವನದ ಎರಡನೆಯ ಹಂತವಾಗಿದೆ. ಏಕೆಂದರೆ ಜೀವನದ ಮತ್ತು ವಂಶವೃದ್ಧಿಯ ಹಂತ ಬಹು ಮುಖ್ಯವಾದುದಾಗಿರುವುದರಿಂದ ಮದುವೆಯ ಕಾಲದಲ್ಲಿ ಮರಿಸ್ವಾಮಿ ದೇವಸ್ಥಾನದಲ್ಲಿ ಸಮಾರಂಭಗಳು ಜರುಗುತ್ತವೆ. ಆದರೆ ಬಹಳ ಕಡಿಮೆ ವೀರಶೈವ ಸಮುದಾಯದವರ ಆರಾಧ್ಯ ದೇವರು ಮನೆದೇವರಾಗಿರುವುದರಿಂದ ಈ ದೇವರಿಗೆ ಮದುವೆಯ ಸಂದರ್ಭದಲ್ಲಿ ವಿಶೇಷ ಪೂಜೆ ಪುನಸ್ಕಾರಗಳನ್ನು ಮಾಡುತ್ತಾರೆ. ಮದುಮಗನು ಮರಿಸ್ವಾಮಿ ದೇವರಿಗೆ ಮೊದಲು ಪೂಜೆ ಮಾಡಿ ನಂತರ ಉಳಿದ ದೇವರಿಗೆಲ್ಲಾ ಪೂಜೆ ಸಲ್ಲಿಸುವ ಪದ್ದತಿದೆ. ವೀರಶೈವ ಜನಾಂಗದವರು ಮದುಮಗನಿಗೆ ಶಾಸ್ತ್ರೋಕ್ತವಾಗಿ, ಸಂಪ್ರದಾಯವಾಗಿ ಕಾರ್ಯಕ್ರಮಗಳನ್ನು ಮಾಡುತ್ತಾರೆ. ಅಂದರೆ ದೇವಸ್ಥಾನದಲ್ಲಿ ಮದುಮಗನಾಗುವುದು ಅರಿಣ ಹಚ್ಚಿ ಕೈಗೆ ಕಂಕಣ ಕಟ್ಟಿ ಶ್ಯಾಲು ಹೊದಿಸುತ್ತಾರೆ. ಕೈಯಲ್ಲಿ ಒಂದು ನಿಂಬೆ ಹಣ್ಣು ಕೊಟ್ಟು ಅತ್ತಿತ್ತ ತಿರುಗಾಡದಂತೆ ಸೂಚಿಸುತ್ತಾರೆ. ನಂತರ ಮನೆದೇವರಿಗೆ ಪೂಜೆ ಸಲ್ಲಿಸಿ ದೇವರ ಆಶೀರ್ವಾದ ಪಡೆದು ನಂತರ ಇತರೆ ದೇವರಿಗೆ ಹೋಗುತ್ತಾರೆ. ಆ ನಂತರ ಮದುವೆಯ ಶಾಸ್ತ್ರಗಳನ್ನು ಮಾಡುತ್ತಾರೆ. ಅನೇಕರು ಮನೆಯ ದೇವರಿಗೆ ಪೂಜೆ ಸಲ್ಲಿಸಿದ ನಂತರ ಉಳಿದ ದೇವರುಗಳಿಗೆ ಪೂಜೆ ಸಲ್ಲಿಸುವ ಪದ್ದತಿ ಇದೆ. ಉದಾ: ಕಾಡುಗೊಲ್ಲರು ತಮ್ಮ ಮನೆಯ ದೇವರು ಕಾನಾಮೊಡಗಿನಲ್ಲಿ ಇರುವುದರಿಂದ ಅಲ್ಲಿಗೆ ಹೋಗಿ ಪೂಜೆ ಸಲ್ಲಿಸಿದ ನಂತರ ಮದುವೆಯ

ಕಾರ್ಯಕ್ರಮಗಳನ್ನು ಮಾಡುತ್ತಾರೆ. ಎಂಬ ವಿಷಯವನ್ನು ಕ್ಷೇತ್ರಕಾರ್ಯದ ಸಂದರ್ಭಗಳಲ್ಲಿ ಬೈರಾಪುರದ ಜನರಿಂದ ತಿಳಿದು ಬಂದಿದೆ.

ಭೈರಾಪುರ ಗ್ರಾಮದ ಎಲ್ಲಾ ಸಮುದಾಯದವರು ಮೂಹರ್ತಕ್ಕೆ ಹೋಗುವಂತಹ ಸಂದರ್ಭದಲ್ಲಿ ಮರಿಸ್ವಾಮಿ ದೇವರಿಗೆ ಬಂದು ಹಣ್ಣು ಕಾು ಮಾಡಿಸಿ ನಂತರ ದೇವರ ತೀರ್ಥವನ್ನು ವಧು ವರರ ಮೇಲೆ ಹಾಕಿದ ನಂತರ ಮುಹರ್ತದ ಕಾರ್ಯಕ್ರಮ ನೆಡೆಯುತ್ತದೆ. ಮೂಹರ್ತ ಆದಮೇಲೆ ರಾತ್ರಿ ಸಮಯದಲ್ಲಿ ಮೆರವಣಿಗೆ ಮಾಡಿ ಊರಲ್ಲಿರುವ ಎಲ್ಲಾ ದೇವರಿಗೂ ಹಣ್ಣು ಕಾಯಿ ಕರ್ಪೂರ ಮಾಡಿಸುತ್ತಾರೆ. ಈ ರೀತಿಯ ಆಚರಣೆಗಳನ್ನು ಎಲ್ಲಾ ಸಮುದಾಯದವರಲ್ಲಿ ಕಾಣಬಹುದು. ಆದರೆ ಮಾದಿಗ ಸಮುದಾಯದಲ್ಲಿ ಸ್ವಲ್ಪ ವ್ಯತ್ಯಾಸವನ್ನು ಕಾಣುತ್ತೇವೆ. ಈ ಜನಾಂಗದವರು ದೇವಸ್ಥನದ ಒಳಗಡೆ ಪ್ರವೇಶಿಸದೇ ಹೊರಗಡೆ ನಿಂತು ಪೂಜೆ ಸಲ್ಲಿಸುತ್ತಾರೆ. ಏಕೆಂದರೆ ಇವರು ಒಳಗಡೆ ಹೋದರೆ ನಮಗೆ ಏನಾದರೂ ಕೆಡಕಾಗಬಹುದು ಎಂಬ ನಂಬಿಕೆಯಿಂದ ಒಳಗಡೆ ಪ್ರವೇಶಿಸುವುದಿಲ್ಲ. ಅರ್ಚಕರು ಬಂದು ಇವರನ್ನು ಒಳಗಡೆ ಪ್ರವೇಶಿಸುವಂತೆ ಹೇಳಿದರೂ ಅವರು ಪ್ರವೇಶ ಮಾಡುವುದಿಲ್ಲ.

## ಮರಣ

ಪ್ರತಿಯೊಬ್ಬ ಮನುಷ್ಯನು ಹುಟ್ಟಿದ ಮೇಲೆ ಸಾಯಲೇಬೇಕು ಇದು ಪ್ರಕೃತಿಯ ನಿಯಮ ಆದರೆ ಈ ಹುಟ್ಟು ಸಾವಿನ ನಡುವೆ ಇರುವ ಜೀವಿತದ ಕಾಲವು ಬಹು ಮುಖ್ಯವಾದುದು. ಈ ಜೀವಿತಾವದಿಯಲ್ಲಿ ಮನುಷ್ಯ ಒಳ್ಳೆಯ ಸಾಧನೆಗಳನ್ನು ಸಾದಿಸಲು ಪ್ರಯತ್ನಿಸುತ್ತಾನೆ. ಈ ಪ್ರಯತ್ನಗಳು ಫಲಿಸಬೇಕಾದರೆ ಮನುಷ್ಯ ಒಂದಲ್ಲಾ ಒಂದು ರೀತಿಯ ದೈವಶಕ್ತಿಯನ್ನು ಆರಾಧಿಸುತ್ತಾನೆ. ಏಕೆಂದರೆ ದೇವರನ್ನು ನಂಬಿದಷ್ಟು ಈ ವೈಜ್ಞಾನಿಕತೆಯನ್ನು ನಂಬಲಾರ. ಇಂತಹ ನಂಬಿಕೆಯನ್ನು ಮುಖ್ಯವಾಗಿ ಗ್ರಾಮೀಣ ಪ್ರದೇಶದ ಜನರು ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದು. ಮರಿಸ್ವಾಮಿ ದೇವರ ಒಂದು ನಂಬಿಕೆ ಗ್ರಾಮದಲ್ಲಿ ಮನದಟ್ಟಾಗಿ ಬಿಟ್ಟಿದೆ. ವಿಶೇಷವಾಗಿ ವೀರಶೈವ ಜನಾಂಗದಲ್ಲಿ ಮರಣ ಹೊಂದಿದರೆ ಆವರ ಸಂಪ್ರದಾಯದಂತೆ ಶವಸಂಸ್ಕಾರವನ್ನು ಮಾಡುತ್ತಾರೆ. ಸತ್ತಂತಹ ವ್ಯಕ್ತಿಯನ್ನು ಸ್ನಾನಮಾಡಿಸಿ ಹೊಸ ಬಟ್ಟೆ ತೊಡಿಸಿ ವಿಭೂತಿ ಹಚ್ಚಿ ಹೂವಿನಹಾರವನ್ನು ಹಾಕಿ ದೇವರಿಗೆ ಸಮಾನವೆಂದು ಪೂಜಿಸಿ ಶವಸಂಸ್ಕಾರ ಮಾಡುತ್ತಾರೆ. ಈ ಶವಸಂಸ್ಕಾರ ಮಾಡುವಂತಹ ವಿಧಾನ ಎಲ್ಲಾಸಮುದಾಯದವರ ವಿರುದ್ದವಾಗಿರುತ್ತದೆ. ಏಕೆಂದರೆ ಸತ್ತಂತಹ ವ್ಯಕ್ತಿಯನ್ನು ಊಳುವಾಗ ತಪಸ್ಸಿನ ರೀತಿಯಲ್ಲಿ ಆ ಶವವನ್ನು ಕುಳ್ಳಿರಿಸಿ ಸುತ್ತಲೂ ಸುಮಾರು ೫೦೦ರಿಂದ ೬೦೦ ವಿಭೂತಿ ಕಟ್ಟುಗಳನ್ನು ಹಾಕಿ ಊದುಬತ್ತಿ ಹಚ್ಚಿ ಶವಸಂಸ್ಕಾರ ಮಾಡುತ್ತಾರೆ. ಇನ್ನು ಕೆಲವು ಸಮುದಾಯದವರು ಶವವನ್ನು ಸುಡುತ್ತಾರೆ. ಆದರೆ ವೀರಶೈವರು ಭೂಮಿಯನ್ನು ಅಗೆದು ಮನೆ ಮಾಡಿ ಊಳುತ್ತಾರೆ. ಆದರೆ ಮುಸ್ಲಿಂ ಜನಾಂಗದಲ್ಲಿ ಶವಸಂಸ್ಕಾರ ಮಾಡುವ ಪದ್ದತಿ ಹಿಂದುಗಳ ಪದ್ದತಿಗೆ ವಿರುದ್ದವಾಗಿರುತ್ತದೆ. ಹಿಂದುಗಳು ಶವಸಂಸ್ಕಾರ ಮುಗಿದ ನಂತರ ಹೊಳೆ, ಬಾವಿ, ಕೆರೆ, ಹಳ್ಳಗಳಲ್ಲಿ ಇಲ್ಲವೇ ಮನೆಯಲ್ಲಿ ಸ್ನಾನ ಮಾಡುತ್ತಾರೆ. ಆದರೆ ಮುಸ್ಲಿಂ ಜನಾಂಗದವರು ಶವಸಂಸ್ಕಾರಕ್ಕೆ ಹೋಗುವ ಮುನ್ನವೇ ಸ್ನಾನ ಮಾಡಿ ದೇವರಲ್ಲಿ ವಂದಿಸಿ ಶವಸಂಸ್ಕಾರಕ್ಕೆ ಹೋಗುವ ಪದ್ದತಿ ಇದೆ.

ವೀರಶೈವ ಸಮುದಾಯದವರ ಮನೆಯಲ್ಲಿ ಮರಣ ಹೊಂದಿದ ಮನೆಗೆ ಹಾಗೂ ಅವರ ಸಂಬಂಧಿಕರ ಮನೆಗಳಿಗೆ ಬೇರೆಯವರು ಪ್ರವೇಶಿಸುವಂತಿಲ್ಲ. ಏಕೆಂದರೆ ಅವರ ಮನೆಯು ಮುಟ್ಟಾಗಿದೆ ಎಂದು ತಿಳಿದು ಮನೆಯನ್ನು ಸುಣ್ಣ ಬಣ್ಣಗಳಿಂದ ಬಳಿದು ದೀಪ ಹಾಕಿ ಎಡೆ ಹಾಕಿದ ನಂತರ ಅವರ ಮನೆಗಳಿಗೆ ಪ್ರವೇಶಿಸುತ್ತಾರೆ. ಊರಿನ ಕೆಲವು ಜನರಿಗೆ ಬಂದುಗಳಿಗೆ ಊಟ ಮಾಡಿಸುತ್ತಾರೆ. ಅಲ್ಲಿಯವರೆಗೂ ಆ ಮನೆಯವರು ದೇವಸ್ಥಾನದ ಒಳಗೆ ಹೋಗುವಂತಿಲ್ಲ, ಪೂಜೆ ಸಲ್ಲಿಸುವಂತಿಲ್ಲ. ಒಂದು ವೇಳೆ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸಿದರೆ ಅದರಿಂದ ದೇವರು ಕೋಪಗೊಂಡು ಶಾಪ ಹಾಕಬಹುದೆಂಬ ಇಲ್ಲವೇ ಆಪತ್ತು ಬಂದೊದಗುತ್ತದೆ ಎಂಬ ಭಯ ಜನರಲ್ಲಿ ಬೇರೂರಿದೆ ಆದ್ದರಿಂದ ಈ ಎಲ್ಲಾ ಕಾರ್ಯಗಳನ್ನು ಮಾಡುವ ಪದ್ಧತಿಗಳಿವೆ.

ಮರಿಸ್ವಾಮಿ ದೇವರ ಅರ್ಚಕರು ಮರಣ ಹೊಂದಿದಾಗ ಅವರನ್ನು ವಿಶೇಷವಾದ ರೀತಿಯಲ್ಲಿ ಶವಸಂಸ್ಕಾರ ಮಾಡುತ್ತಾರೆ. ಕೇವಲ ಒಂದು ಬಳಗದವರು ಮಾತ್ರ ಶವಸಂಸ್ಕಾರಕ್ಕೆ ಬರುವುದಲ್ಲದೇ ಭಕ್ತರೆಲ್ಲರೂ ಜಾತಿ ಬೇದಗಳಿಲ್ಲದೇ ಲಿಂಗ ಬೇದಗಳಿಲ್ಲದೇ ಇವರ ಶವಸಂಸ್ಕಾರಕ್ಕೆ ಬರುತ್ತಾರೆ. ಇದರ ನೆನಪಿಗಾಗಿ ಸಮಾದಿಯನ್ನು ಕಟ್ಟಿಸುತ್ತಾರೆ. ಈ ಸಮಾದಿಯನ್ನು ದೇವರ ಮನೋಬಾವನೆಂದ ಪೂಜಿಸುತ್ತಾರೆ. ಏಕೆಂದರೆ 'ಅರ್ಚಕರು ದೇವರ ಮಗ' ಎಂಬ ನಂಬಿಕೆ ಜನರದ್ದಾಗಿದೆ. ಆದ್ದರಿಂದ ಎಲ್ಲಾ ಸಮುದಾಯದ ಭಕ್ತರು ಪೂಜಿಸುತ್ತಾರೆ. ಭೈರಾಪುರದಿಂದ ಒಂದುವರೆ ಕಿ.ಮೀ. ದೂರದಲ್ಲಿರುವ ಗುಡ್ಡದಹಳ್ಳಿ ಸಮೀಪವಿರುವ ಅರ್ಚಕರ ಜಮೀನಿನಲ್ಲಿ ಅವರನ್ನು ಶವಸಂಸ್ಕಾರ ಮಾಡಲಾಗಿದೆ. ಅಲ್ಲಿ ಒಂದು ಮಂಟಪವನ್ನು ಕಟ್ಟಿಸುತ್ತಾರೆ. ಈ ಅರ್ಚಕರು ನಿಷ್ಠಾವಂತರು ಅವರ ಬಾಯಿಂದ ಅಂದದ್ದೆಲ್ಲಾ ಹಾಗೆಯೆ ನೆಡೆಯುತ್ತದೆ. ಎಂಬ ನಂಬಿಕೆಯಿಂದ ಆತನನ್ನು ಮರಿಸ್ವಾಮಿಯ ವಾರದಂದು ಸಮಾದಿಗೂ ಸಹ ಪೂಜೆ ಸಲ್ಲಿಸುತ್ತಾರೆ. ಈ ರೀತಿಯಾಗಿ ಜನರು ಒಂದು ಸಾರಿ ನಂಬಿದ್ದರೆ, ಅವರು ವಂಶಪರಂಪರೆಯಾಗಿ ಆ ನಂಬಿಕೆಯನ್ನು ಮುಂದುವರೆಸಿಕೊಂಡು ಬರುವಂತವರು ಈ ನಮ್ಮ ಜನಪದರು. ಆದುದರಿಂದ ಈ ನಮ್ಮ ಜನಪದರು ಯಾವುದೇ ಒಂದು ಆಚರಣೆಯನ್ನು ಮಾಡಿದರೆ ಅದಕ್ಕೊಂದು ಅರ್ಥಗರ್ಭಿತವಾದ ನಂಬಿಕೆ ಅವರಲ್ಲಿ ಮನೆ ಮಾಡಿರುತ್ತದೆ.

## ೨. ವಾರ್ಷಿಕಾವರ್ತನ ಆಚರಣೆಗಳು

ಒಂದು ವರ್ಷದಲ್ಲಿ ಆಚರಿಸುವ ಆಚರಣೆಗಳನ್ನು "ವಾರ್ಕಾವರ್ತನ" ಆಚರಣೆಗಳೆಂದು ಕರೆಯುತ್ತಾರೆ. ಒಂದು ವರ್ಷದಲ್ಲಿ ಆಚರಿಸುವಂತಹ ಆಚರಣೆಗಳು, ಹಬ್ಬ, ಹರಿದಿನ, ಜಾತ್ರೆ, ತೇರು, ಹುಣ್ಣಿಮೆ, ವಾರ, ಇತ್ಯಾದಿ ಇವುಗಳೆಲ್ಲವೂ ವಾರ್ಕಾವರ್ತನ ಆಚರಣೆಗಳಲ್ಲಿ ನಾವು ಕಾಣಬಹುದಾಗಿದೆ. ಯುಗಾದಿಂದ ಯುಗಾದಿಯವರೆಗೆ ನೆಡೆಯುವ ಹಬ್ಬ, ಹುಣ್ಣಿಮೆ, ಜಾತ್ರೆ, ಅಮವಾಸೆ ಮುಂತಾದವುಗಳನ್ನು ವಾರ್ಕಾವರ್ತನ ಆಚರಣೆಗಳೆಂದು ಕರೆಯುತ್ತೇವೆ.

## ಯುಗಾದಿ

ಹಳೆಯ ಮತ್ತು ಹೊಸದನ್ನು ಜೋಡಿಸುವ ಸುವರ್ಣ ಸೇತುವೆಯೇ ಯುಗಾದಿ. ಪಾಲ್ಗುಣ ಬಹುಳ ಅಮವಾಸೆಯಂದು ಹಳೆಯ ವರ್ಷಕ್ಕೆ ವಿದಾಯ ಹೇಳಿ ಮರುದಿನ ಚೈತ್ರ ಶುಕ್ಲ ಪ್ರತಿಪಡೆಯಂದು ಹೊಸವರ್ಷವನ್ನು ಸ್ವಾಗತಿಸುವುದೇ ಯುಗಾದಿ ಹಿಂದಿನ ವರ್ಷವೆಂಬುದು ಕಾಲಪುರುಷನ ವರಣ ಮತ್ತು ಹೊಸವರ್ಷದ ರೂಪದ ಶಿಶುವಿನ ಜನನ ಸೂಚಕಗಳಾಗಿವೆ. ಚೈತ್ರಮಾಸದಿಂದ ಹೊಸವರ್ಷದ ಗಣನೆ ಪ್ರಾರಂಭವಾಗುವುದೆಂದು ಬಲ್ಲವರ ಅಭಿಪ್ರಾಯ. ಯುಗಾದಿ ಎಂದ ಕೂಡಲೇ ನಮಗೆ ನೆನಪಿಗೆ ಬರುವುದು ಬೇವು–ಬೆಲ್ಲ ಬೇವಿನ ಚಿಗುರಿನ ಕಹಿ ಬೆಲ್ಲದ ಸಿಹಿ ಇವೆರಡೂ ಬದುಕಿನ ಪ್ರತೀಕಗಳಾಗಿವೆ. ನೋವು ನಲಿವುಗಳ ಸಂಕೇತವನ್ನು ಇವು ಸೂಚಿಸುತ್ತವೆ. ಆರ್ಯವೇದದ ಪ್ರಕಾರ ವಸಂತಕಾಲದಲ್ಲಿ ತಲೆದೋರುವ ಶಾರೀರಿಕ ರೋಗ ರುಜನಿಗಳಿಗೆ ಬೇವು ಒಳ್ಳೆಯ ಔಷದವಂತೆ, ಇಂತಹ ಶ್ರೇಷ್ಠವಾದ ಹಬ್ಬವನ್ನು ಭೈರಾಪುರದ ಮರಿಸ್ವಾಮಿ ಕ್ಷೇತ್ರದಲ್ಲಿಯೂ ಸಹ ಆಚರಿಸುತ್ತಾರೆ.

ಯುಗಾದಿಯಲ್ಲಿ ಮರಿಸ್ವಾಮಿಗೆ ಇತರೆ ಮೂರ್ತಿಗಳಿಗೆ ವಿಶೇಷವಾಗಿ ಎಣ್ಣೆ ಪೂಜೆಯನ್ನು ಅಭಿಷೇಕವನ್ನು ಮಾಡಲಾಗುತ್ತದೆ. ಮೊದಲನೆಯ ದಿನ ನಿತ್ಯ ಪೂಜೆ ನಡೆಯುತ್ತದೆ. ಅಂದು ಎಲ್ಲರು ಹೊಸ ವಸ್ತ್ರಗಳನ್ನು ಧರಿಸಿಕೊಂಡು ದೇವಸ್ಥಾನಕ್ಕೆ ಬರುತ್ತಾರೆ. ಅಂದಿನ ರಾತ್ರಿ ಮನೆಯಲ್ಲಿಯೂ ಸಹ ಪೂಜೆಯನ್ನು ಮಾಡುವುದರ ಮೂಲಕ ಒಳ್ಳೊಳ್ಳೆಯ ಊಟೋಪಚಾರಗಳು ನೆಡೆಯುತ್ತವೆ. ಯುಗಾದಿಯ ಸಂಪ್ರದಾಯದಂತೆ ಬೇವು ಬೆಲ್ಲದ ಮಿಶ್ರಣದಿಂದ ಮಾಡಿದ ಸಿಹಿ ಯುಗಾದಿಯ ಸಿಹಿಯನ್ನು ಬಂದ ಭಕ್ತಾದಿಗಳೆಲ್ಲಾ ದೇವಸ್ಥಾನದಲ್ಲಿ ಹಂಚಲಾಗುತ್ತದೆ.

ಎರಡನೆಯ ದಿನದಂದು ಎಲ್ಲರು ಕೂಡಿ ಓಕಳಿಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಇದರ ಸಂಕೇತ ನಮ್ಮ ಜೀವನದುದ್ದಕ್ಕೂ ಬದುಕು ಬಣ್ಣದಂತೆ ಕಂಗೊಳಿಸಲು ಹಿಂದಿನ ಘಟನೆಗಳನ್ನು ಹೊಸ ಬದುಕನ್ನು ಪ್ರಾರಂಭಸೋಣ ಎಂಬ ಸಂಕೇತವನ್ನು ಸೂಚಿಸುದಾಗಿದೆ ಇಲ್ಲಿ ಕೇವಲ ಒಂದು ಜಾತಿ–ಧರ್ಮದವರು ಮಾತ್ರ ಆಚರಣೆ ಮಾಡದೇ ಇಡೀ ಮಾನವ ಕುಲವೇ ಆಚರಿಸುವಂತಹ ಹಬ್ಬವಾಗಿದೆ. ಹೀಗೆ ಹಿಂದೂ ಧರ್ಮದ ಪ್ರಕಾರ ಹೊಸದಿನದ ಆಚರಣೆಯ ಮೂಲಕ ಆಚರಣೆಯನ್ನು ಮಾಡಲಾಗುತ್ತದೆ. ಭಕ್ತಾದಿಗಳು ಸಹ ಮನೆಯಲ್ಲಿ ಮಾಡಿದ ಬೇವು ಬೆಲ್ಲ ಹಂಚಿಕೊಂಡು ತಿನ್ನುತ್ತಾರೆ. ಈ ರೀತಿಯ ಹಬ್ಬವು ಸಮೂಹದ ಸಂಕೇತವಾಗಿ ಪರಿಗಣಿಸುತ್ತದೆ.

ವಿನೋದ ಪ್ರಿಯರಾದಂತಹ ಈ ನಮ್ಮ ಧಾರ್ಮಿಕ ಜನಪದರು ಹಲವಾರು ವಿವಿಧ ಕ್ರೀಡೆಗಳನ್ನು ಆಡುವುದರ ಮೂಲಕ ಮನಸ್ಸನ್ನು ಹಗುರ ಮಾಡಿಕೊಳ್ಳುತ್ತಾರೆ. ಜೂಜು ಆಡುವುದು, ಅಂದರೆ ನಿಂಬೆಕಾ ಎಸೆಯುವುದು, ತೆಂಗಿನಕಾ ಹೊಡೆಯುವುದು, ಕಬ್ಬಡ್ಡಿ ಆಡುವುದು ಹೀಗೆ ಹಲವಾರು ಕ್ರೀಡೆಗಳಲ್ಲಿ

ಭಾಗವಹಿಸುತ್ತಾರೆ. ಯುಗಾದಿಯ ಹಬ್ಬದ ಸಮಯದಲ್ಲಿ ಎರಡು ತಿಂಗಳ ಮುಂಚಿತವಾಗಿಯೇ ನಾಟಕದ ತಾಲೀಮು ನಡೆದು ಯುಗಾದಿ ಹಬ್ಬದ ಸಂದರ್ಭದಲ್ಲಿ ನಾಟಕವನ್ನು ಪ್ರದರ್ಶಿಸುತ್ತಾರೆ.

## ಗೌರಿವ್ರತ

ಚೈತ್ರಶುದ್ಧ ತದಿಗೆಯಂದು ಹಿಂದೆ ಶುಂಭ-ನಿಶುಂಭರ ವಧೆಯ ಕಾಲದಲ್ಲಿ ಆಧಿಶಕ್ತಿಯೇ ಸರಸ್ವತಿ ರೂಪದಲ್ಲಿ ಅವತರಿಸಿ, ಹಿಮಪರ್ವತದ ದಕ್ಷಿಣಭಾಗದಲ್ಲಿ ಒಂದು ಮರಕ್ಕೆ ಉಯ್ಯಾಲೆ ಕಟ್ಟಿ ಹದಿನೈದು ವರ್ಷದ ಸ್ತ್ರೀರೂಪದಲ್ಲಿ ತೂಗಿಕೊಳ್ಳುತ್ತಾ ಇದ್ದಳೆಂದು ಉಲ್ಲೇಖವಿದೆ. ಚೈತ್ರಶೂದ್ಧ ತದಿಗೆಯಿಂದ ವೈಶಾಖ ತದಿಗೆಯವರೆಗೂ ಈ ವ್ರತವನ್ನು ಆಚರಿಸುವುದುಂಟು. ಸ್ತ್ರೀ ಯರಿಗೆ ಮಂಗಳವನ್ನುಂಟು ಮಾಡುವವ್ರತವಿದು. ತೊಟ್ಟಿಲಲ್ಲಿ ಕಲಶವನ್ನಿಟ್ಟುಖಣ, ಅಂಗನೂಲು, ಗಂಧಾಕ್ಷತೆಗಳಿಂದ ಅಲಂಕರಿಸಿ ಪೂಜಿಸುವುದು.

ಗ್ರಾಮೀಣ ಪ್ರದೇಶದಲ್ಲಿ ಶ್ರೀಮತಿಯವರು ಸಹ ಇಂತಹ ಒಂದು ಆಚರಣೆಗಳನ್ನು ಬಹಳ ಅದ್ದೂರಿಯಾಗಿ ಮಾಡುತ್ತಾರೆ. ಗೌರಿಮಕ್ಕಳೆಂದು ಅಂದು ಎಲ್ಲಾ ಸ್ತ್ರೀಯರು ಹೊಸ ಉಡುಪುಗಳನ್ನು ಧರಿಸಿಕೊಂಡು ಗೌರಿಮಕ್ಕಳಾಗುತ್ತಾರೆ. "ಕಾರಹುಣ್ಣಿಮೆಯಲ್ಲಿ ಎತ್ತು ನೋಡಲು ಹೋಗಬಾರದು, ಕನ್ಯಾ ನೋಡಲು ಗೌರಿಹುಣ್ಣಿಮೆಯಂದು ಹೋಗಬಾರದು, ಎಂಬ ಹೇಳಿಕೆಗಳು ಸತ್ಯದಿಂದ ಕೂಡಿವೆ. ಏಕೆಂದರೆ ಆ ದಿನದಂದು ಎತ್ತುಗಳನ್ನು ಮೈತೊಳೆದು ಬಣ್ಣವನ್ನು ಹಚ್ಚಿ ಸುಂದರವಾಗಿ ಅಲಂಕರಿಸಿರುತ್ತಾರೆ. ಅದೇ ರೀತಿ ಹುಡುಗಿಯರು ಸಹ ಆ ದಿನದಂದು ಒಳ್ಳೆಯ ಬಟ್ಟೆಗಳನ್ನು, ಆಭರಣಗಳನ್ನು ಹಾಕಿಕೊಂಡು ಮುಖವನ್ನು ಮೇಕಪ್ ಮಾಡಿಕೊಂಡಿರುವುದರಿಂದ ಸುಂದರವಾಗಿ ಕಾಣುತ್ತಿದ್ದು, ಅವರ ಮೂಲ ಸ್ವರೂಪವನ್ನು ಗುರುತಿಸದೇ ಆ ಸುಂದರ ನೋಟಕ್ಕೆ ಮಾರು ಹೋಗಿ ಮೋಸಕ್ಕೊಳಗಾಗುವುದುಂಟು ಎಂಬ ಭಾವನೆಯಿಂದ ಈ ಮೇಲಿನ ಮಾತು ಸರಿ ಎನಿಸುತ್ತದೆ.

ಭೈರಾಪುರದಲ್ಲಿಯೂ ಸಹ ಯುವತಿಯರು ಮತ್ತು ಸ್ತ್ರೀಯರು ಸುಮಾರು ಒಂಭತ್ತು ದಿನಗಳ ಕಾಲ ಗೌರಿ ಮಕ್ಕಳಾಗಿ ಬೇರೆ ಊರಿಂದ ಬಂದಂತಹ ನೆಂಟರಿಂದ ಕಾಣಿಕೆರೂಪದಲ್ಲಿ ಹಣವನ್ನು ಪ್ರೀತಿಂದ ತೆಗೆದುಕೊಂಡು ಹಬ್ಬವನ್ನು ಆಚರಿಸುತ್ತಾರೆ. ಅಂದು ಸಕ್ಕರೆ ದೀಪವನ್ನು ಬೆಳಗಿಸುವುದರ ಮೂಲಕ ಮರಿಸ್ವಾಮಿ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿ ಅಲ್ಲಿಂದ ಗೌರಿಯನ್ನು ತೆಗೆದುಕೊಂಡು ತಮಟೆ, ವಾದ್ಯಗಳೊಂದಿಗೆ ಜನಸಂದಣಿಯ ಮೂಲಕ ಪಟಾಕೆಗಳನ್ನು ಹಾರಿಸುತ್ತಾ ಮೆರವಣಿಗೆಯ ಮೂಲಕ ಗಂಗೆಯಲ್ಲಿ ಬಿಟ್ಟು ಬರುತ್ತಾರೆ. ಈ ರೀತಿಯ ಆಚರಣೆ ನಮ್ಮ ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಜೀವಂತವಾಗಿವೆ.

## ಕಾರಹುಣ್ಣಿಮೆ

ಗೌರಿವ್ರತವನ್ನು ಸ್ತ್ರೀಯರು ಆಚರಿಸುವುವಂತಹ ಹಬ್ಬವಾದರೆ ಕಾರಹುಣ್ಣಿಮೆಯು ಎತ್ತುಗಳ ಹಬ್ಬವಾಗಿದೆ. ಅಂದು ಎತ್ತುಗಳನ್ನು ನೇಗಿಲು ಕೆಲಸಗಳಿಗಾಗಿ ಬಳಸುವಂತಿಲ್ಲ. ಶುಭ್ರವಾಗಿ ಮೈತೊಳೆದು ಕೊಂಬುಗಳಿಗೆ ಬಣ್ಣ ಹಚ್ಚಿ ಗಂಟೆಯ ಸರ ಹಾಕಿ ಹೂವಿನ ಕುಚ್ಚ ಹಾಕಿ ಜೂಜಾಟಕ್ಕೆಂದು ಬಿಡುತ್ತಾರೆ. ಒಂದು ನಿಗದಿಪಡಿಸಿದ ಸ್ಥಳದಿಂದ ಬುಡ್ಡೆಕಲ್ಲಿನವರೆಗೆ ಮೇರೆಯನ್ನಿಟ್ಟುಕೊಂಡು ಎತ್ತುಗಳನ್ನು ಜೂಜಾಟಕ್ಕೆ ಓಡಲು ಬಿಡುತ್ತಾರೆ. ಯಾವ ಎತ್ತು ಮೊದಲು ಬರುತ್ತದೆಯೋ ಅದನ್ನು ಮೆರವಣಿಗೆ ಮಾಡಿ ಬಹುಮಾನವನ್ನು ನೀಡುತ್ತಾರೆ. ಇದಕ್ಕೆ ಕರಿಹರಿಯುವುದು ಎಂದು ಕರೆಯುತ್ತಾರೆ. ಇಲ್ಲಿ ಗಮನಿಸಬಹುದಾದ ಅಂಶವೇನೆಂದರೆ ಪ್ರಾಣಿಗಳನ್ನು ಸಹ ಮಾನವರಂತೆ ಕಾಣುವಂತಹ ದೃ ನಮ್ಮ ಜನಪರದ್ದು ಎನ್ನಬಹುದು.

## ವಿಜಯದಶಮಿ

ಆಶ್ವೀಜಮಾಸದ ಶುದ್ಧಪಾಡ್ಯಮಿಂದ ದಶಮಿಯವರೆಗೂ ಹತ್ತು ದಿನಗಳು ಬಹು ಪ್ರಾಶಸ್ತ್ಯವಾದವುಗಳು ಮೊದಲ ಒಂಭತ್ತು ದಿನಗಳನ್ನು ನವರಾತ್ರಿಯೆಂದು ಹತ್ತನೆಯ ದಿನವನ್ನು ವಿಜಯದಶಮಿಯೆಂದು ಕರೆಯುವುದುಂಟು. ಶರದ್ ಋತುವಿನಲ್ಲಿ ಬರುವುದರಿಂದ ಶರನ್ನವರಾತ್ರಿ ಎಂದು ಹೇಳುವರು. ಈ ಹತ್ತು ದಿನಗಳಲ್ಲಿಯೂ ಹಿಂದುಗಳು ಶಕ್ತಿಪೂಜಾ ಸಂಬಂಧದ ಉಪಾಸನೆಯನ್ನು ನಡೆಸುವರು. ಈ ನವರಾತ್ರಿ ಸಮಯದಲ್ಲಿ ಅನೇಕರು ನಾಡಹಬ್ಬ ಆಚರಿಸುವುದುಂಟು. ನವರಾತ್ರಿಯನ್ನು ನಾಡಹಬ್ಬವೆಂದು ಪರಿಗಣಿಸಬಹುದು. ನಾಡು-ನುಡಿ ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಪದ್ಯುಕ್ತಕ್ರಿಯ ಅರಿವನ್ನು ನಾಡಿನ ಜನತೆಗೆ ಮಾಡಿಕೊಡುವ ಉದ್ದೇಶದಿಂದ ಈ ನಾಡಹಬ್ಬವನ್ನು ಆಚರಿಸುವುದುಂಟು. ಇದು ಗೌರವಯುತವಾದ ಕೆಲಸ. ನವರಾತ್ರಿಗೂ ಇದಕ್ಕೂ ನೇರವಾದ ಸಂಬಂಧ ಇಲ್ಲದಿರುವುದು ಆದರೂ ನಾಡ ಹಬ್ಬವನ್ನು ಆಚರಿಸುವುದಕ್ಕೆ ಈ ಆಶ್ವೀಜ ಮಾಸದ ನವರಾತ್ರಿಯ ಶರದೋತ್ಸವದ ಕಾಲ ಬಹು ಯೋಗ್ಯವಾದುದಾಗಿದೆ. ನಾಡಿನ ಕವಿಗಳು, ಕಲಾವಿದರು, ದಾರ್ಶನಿಕರು, ತತ್ವವೇತ್ತರು ಮೊದಲಾದವರ ಬಗ್ಗೆ ಸರಿಯಾದ ತಿಳುವಳಿಕೆಯುಂಟಾಗಿ ಈ ಮೂಲಕ ಸಾಮಾನ್ಯರ ಜೀವನಾಡಿ ಮಿಡಿದು ರ್‍ಟ್ರೀಯ ಅಭಿಮಾನದಿಂದ ನಾಡಿನ ಘನತೆಯ ವಿಜಯ ವೈಜಯಂತಿಯನ್ನು ಜನತೆ ಸಂತೋಷದಿಂದ ಹಾರಿಸಬೇಕು.

ಭೈರಾಪುರದ ಮರಿಸ್ವಾಮಿ ದೇವಸ್ಥಾನದಲ್ಲಿ ಅಂದು ವಿಶೇಷವಾಗಿ ಹಬ್ಬವನ್ನು ಆಚರಿಸುತ್ತಾರೆ. ಎಲ್ಲಾ ಜನಾಂಗದವರು ಬೇದ ಭಾವನೆಲ್ಲದೆ ದೇವಸ್ಥಾನಕ್ಕೆ ಬಂದು ದೇವರನ್ನು ಆರಾಧಿಸುತ್ತಾರೆ. ಈ ಹಬ್ಬದಂದು ಜನರು ಮನೋವಿನೋಧಕ್ಕಾಗಿ ಗುಂಡು ಎತ್ತುವುದು, ನಿಂಬೆಕಾ ಎಸೆಯುವುದು, ತೆಂಗಿನಕಾಯಿ ಒಡೆಸುವುದು, ಕಬಡ್ಡಿ ಆಡುವುದು ಇನ್ನು ಅನೇಕ ರೀತಿಯ ಜೂಜಾಟಗಳನ್ನು ಈ ನಮ್ಮ ಜನಪದರಲ್ಲಿ ಕಾಣಬಹುದು ಯಾವುದೇ ಕೆಲಸಕಾರ್ಯಗಳಿದ್ದರೂ ಅಂದು ಸಂತೋಷವಾಗಿ ಕಷ್ಟ-ದುಃಖಗಳನ್ನು ಮರೆಯಲು ಈ ತರಹದ ಹಬ್ಬಗಳನ್ನು ಆಚರಿಸುತ್ತಾರೆ. ಮನೆಯಲ್ಲಿ ಹಿರಿಯರನ್ನು ಅವರ ಭಾವಚಿತ್ರದ ರೂಪದಲ್ಲಿ ಒಂದು ಹೊಸ ತಂಬಿಗೆ ನೀರನ್ನು ಇಟ್ಟು ಅದರ ಮೇಲೆ ಹೊಸ ಬಟ್ಟೆ ಹಾಕಿ ಆಯುಧಗಳನ್ನಿಟ್ಟು

ಪೂಜೆ ಮಾಡುವರು. ಆ ದಿನ ಎಲ್ಲರನ್ನು ಮನೆಗೆ ಕರೆದು ಅವರೊಂದಿಗೆ ಉಟೋಪಚಾರ ನಡೆಸುವರು ಹಾಗೆಯೇ ಅಂದು ದೇವಸ್ಥಾನದ ಅನ್ನದಾಸೋಹ ಕೂಡ ನಡೆಸುವರು.

ಕನ್ನಡ ನಾಡ ಹಬ್ಬವೆಂದರೆ ಕಲೆ, ಸಾಹಿತ್ಯ, ಸಂಸ್ಕೃತಿಯ ಪ್ರತಿಧ್ವನಿಯು ಎಲ್ಲಡೆಯಲ್ಲಿಯೂ ಮೊಳಗುವಂತಿರಬೇಕು. ಹೀಗೆ ಭಾರತೀಯರನ್ನು ಉಜ್ವಲಗೊಳಿಸುವ ಕ್ಷಾತ್ರೀಯತೆಯನ್ನು ನರನಾಡಿಗಳಲ್ಲಿಯು ಮಿಡಿಯುವ ನಾಡಹಬ್ಬವು ಆಶ್ವೀಜಶರದೋತ್ಸವ ಕಾಲದಲ್ಲಿ ಎಲ್ಲೆಡೆಯೂ ಮಿಡಿಯುವ ನಾಡಹಬ್ಬವವು ಕೇವಲ ಅಲಂಕಾರ ಪೂಜೆಯಾಗದೆ ಸಾಹಸದ ಪೂಜೆಯಾಗಬೇಕು. ಕ್ಷಾತ್ರೀಯ ಪರಾಕ್ರಮದರ್ಶನದ ಸಾದನೆಯ ಸುದಿನಗಳಾಗಲಿ. "ಸಾಹಸೇ: ಪ್ರತಿವಸತಿ" ಅಂದರೆ ಸಾಹಸದಲ್ಲಿ ಸಿರಿಸಂಪತ್ತು ಇದೆ. ಆದ್ದರಿಂದ ನಮ್ಮದು ಸಾಹಸ ಜೀವನವಾಗಬೇಕು. ಶಕ್ತಿಯು ಕೇವಲ ಹಿಂಸೆಗೆ ಪಾಶವೀತನಕ್ಕೆ ಮಾತ್ರ ಮೀಸಲಾಗದೇ ಬುದ್ಧಿ-ಸಿದ್ಧಿಗಳ ಬೆಳವಣಿಗೆಗೆ ಆತ್ಮೋನ್ನತಿಯ ಸಾಹಸಕ್ಕೆ ನಾಡಿನ ವಿಜಯಕ್ಕೆ ಪೋಷಕವಾಗಿರಬೇಕೆಂಬ ಹಿಂದೂ ಸಂಪ್ರದಾಯದಂತೆ ಸಕಲರಲ್ಲಿ ದೈವಿ ಪ್ರವೃತ್ತಿಯನ್ನು, ಶಕ್ತಿಯನ್ನು ಮೂಡಿಸಲಿ ಇಂಥ ಶಕ್ತಿಯೇ ಭಾರತದ ಪವಿತ್ರಾತ್ಮ ಇದು ಬ್ರಾಹ್ಮಶಕ್ತಿ ಮತ್ತು ಕ್ಷಾತ್ರ ಶಕ್ತಿಗಳ ಸಮನ್ವಯವಾಗಿದೆ.

## ಜಾತ್ರೆ

ಮಾನವ ತನ್ನ ಬೆಳವಣಿಗೆಯ ಪ್ರಾರಂಭದ ದಿನಗಳಲ್ಲಿ ಆಚರಿಸುತ್ತಿದ್ದ ಆಚರಣೆ, ಪದ್ಧತಿಗಳಿಗೆಲ್ಲ ಧಾರ್ಮಿಕ ಭಾವನೆಯೆ ಪ್ರೇರಕವಾಗಿತ್ತು, ಹಿನ್ನೆಲೆಯಾಗಿತ್ತು. ಮಾನವನ ಮನಸ್ಸು ಪಕ್ವಗೊಂಡಂತೆಲ್ಲಾ ಧರ್ಮದ ಬಗೆಗಿನ ಭಾವನೆಗಳು ನಾನಾ ರೀತಿಯಾಗಿ ರೂಪುಗೊಂಡವು. ಪ್ರಕೃತಿಯಲ್ಲಿ ಕಾಣಿಸಿಕೊಳ್ಳುವ ಮಳೆ, ಗುಡುಗು, ಸಿಡಿಲು, ಮಿಂಚು ಇವುಗಳ ಆರ್ಭಟಗಳನ್ನು ಬೆಳಕಿನಲ್ಲಿ ಕಾಣದ ಶಕ್ತಿಯ ಕೈವಾಡವಿದೆ ಎಂದು ಭಾವಿಸಿದ ಅಂಥ ಅಗೋಚರವಾದ ಶಕ್ತಿಯನ್ನು ಪೂಜಿಸುತ್ತಾ ಬಂದ ಕಲ್ಲು, ಮರ, ಮಣ್ಣು, ಭೂಮಿ, ಆಕಾಶ, ಸೂರ್ಯ-ಚಂದ್ರ ಮುಂತಾದವುಗಳನ್ನು ದೈವತ್ವದ ಅಂಶವನ್ನು ಕಂಡುಕೊಳ್ಳುತ್ತಾ ಬಂದ ಅಂದಿನಿಂದ ಇಂದಿನವರೆಗೂ ಮಾನವ ತಿಳಿದೋ ತಿಳಿಯದೆಯೋ ಹಲವಾರು ಆಚರಣೆಗಳನ್ನು ಮಾಡುತ್ತಲೇ ಬಂದಿದ್ದಾನೆ. ಹೀಗೆ ಆಚರಣಗೆ ಬಂದ ಆರಾಧನೆ ಕುಟುಂಬಗಳಿಗೆ ಮೀಸಲಾಗಿತ್ತು. ಜನಸಂಖ್ಯೆಯ ಬುದ್ಧಿ ವಿಕಾಸ ನಾಗರೀಕತೆ ಬೆಳೆದಂತೆ ಆರಾಧನೆ ಕುಟುಂಬದ ಚೌಕಟ್ಟನ್ನು ಮೀರಿ ಸಮಾಜವನ್ನು ಸೇರಿತು. ಬರುಬರುತ್ತಾ ಇದರ ವ್ಯಾಪ್ತಿ ಗ್ರಾಮದಿಂದ ನಗರಕ್ಕೆ ನಿಯಮಿತತನ ಪಡೆದು ಆರಾಧನೆಯೇ (ಆಚರಣೆಗಳು) ಜಾತ್ರೆಗಳಿಗೆ ಕಾರಣವಾಯಿತು.

## ಜಾತ್ರೆಯ ಪದನಿಷ್ಪತ್ತಿ

ಆರಾಧನೆ ಪದಕ್ಕೆ ಸೇವೆ, ಪೂಜೆ ಎಂಬ ಅರ್ಥಗಳಿವೆ. ಜಾತ್ರೆ ಇವುಗಳನ್ನು ಒಳಗೊಂಡಿರುತ್ತದೆ. "ಆರಾಧನೆಗೆ ಜಾತ್ರೆ, ಜಾತ್ರೆಗೆ ಆರಾಧನೆ ಒಂದಕ್ಕೊಂದು ಪೂರಕವಾಗಿವೆ. ಇವೆರಡರ ಸ್ವರೂಪದಲ್ಲಿ ವ್ಯತ್ಯಾಸ

ಕಂಡುಬಂದರೂ ಉದ್ದೇಶ ಮಾತ್ರ ಒಂದೇ ಆಗಿರುತ್ತದೆ. ಆದರೆ ಜಾತ್ರೆಗಳ ಉಗಮವನ್ನು ನಿಖರವಾಗಿ ಹೇಳುವದು ಕಷ್ಟವಾದರೂ ಸ್ಥೂಲವಾಗಿ ಆರಂಭದಲ್ಲಿ ಆರಾಧನೆ ಜಾತ್ರೆಗಳು ಎನ್ನಬಹುದು.

ಪುಣ್ಯಕ್ಷೇತ್ರದರ್ಶನವೇ ಧಾರ್ಮಿಕ ಉದ್ದೇಶದಿಂದ ಮಾಡುವ ಪ್ರಯಾಣ, ಯಾತ್ರೆ, ಯಗಿದೆ. (ನಿಘಂಟುಗಳ ಅರ್ಥ)

ಒಂದು ದೇವತೆಯ ರಥೋತ್ಸವ ವಿಶೇಷ ಕಾರ್ಯಕ್ರಮವನ್ನು ನಾವು ಜಾತ್ರೆ ಎಂದು ಕರೆಯಬಹುದು.

ದೇವರ ರಥೋತ್ಸವ ಮುಂತಾದ ಸಂದರ್ಭಗಳಲ್ಲಿ ಸೇರುವ ಜನರ ಗುಂಪು ಅಥವಾ ಸಮೂಹಕ್ಕೆ ಪರಿಸೆ ಎನ್ನುವರು.

"ಉಕ್ಕಲ ಹಿಂದಿನಿಂದ ದೇವಿಗೆ ಮಾಮೂಲಕ್ಕನಿಗಂ ಜಾತ್ರೆಮಾಳ್ಪಂಮೊಕ್ಕಳಿಗಂ" ಎಂಬುದು ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಜಾತ್ರೆ, ಪರಿಸೆ, ತೇರು ಎಂದು ಇದೆ.

ಇಂಗ್ಲೀಷ್‌ನಲ್ಲಿ ಈಚುಡಿ ಎಂದು ಕರೆಯುವರು. ಈಚುಡಿ ಎಂದರೆ ಕನ್ನಡದಲ್ಲಿ ಹಬ್ಬದೂಟದ ದಿನ ಎಂದರ್ಥ. ಯಾತ್ರೆಯ ತದ್ಭವರೂಪವೇ ಜಾತ್ರೆಯಾಗಿದೆ. ಎಂದು ಹಲವಾರು ವಿದ್ವಾಂಸರ ಅಭಿಪ್ರಾಯವಾಗಿದೆ.

ಯಾವುದೋ ಒಂದು ನಿಗದಿತವಾದ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುಸುವುದು ಜಾತ್ರೆ ಎಂಬುದು ವರ್ಷಕ್ಕೆ ನಿಗದಿಯಾದ ಇನ್ನಿತರ ಅವಧಿ ಗೊತ್ತಾದ ಸ್ಥಳದಲ್ಲಿ ಒಂದು ದಿನವೂ ಇನ್ನು ಹೆಚ್ಚಿನ ದಿನಗಳವರೆಗೂ ಜನ ಸೇರಿ ನಡೆಸುವ ಉತ್ಸವ.

ಹಂ.ಪ.ನಾ. ಅವರು ಜಾತ್ರೆಗಳನ್ನು ಎರಡು ರೀತಿ ವಿಂಗಡಿಸಿದ್ದಾರೆ.

೧. ಆರ್ಯ ಮತ್ತು ಶಿಷ್ಟ ದೇವತೆಗಳ ಜಾತ್ರೆ, ೨. ದ್ರಾವಿಡ ಹಾಗೂ ಗ್ರಾಮದೇವತೆಗಳ ಜಾತ್ರೆ

ದೇ. ಜವರೇಗೌಡರು ಈ ಜಾತ್ರೆಯ ಬಗ್ಗೆ ಹೀಗೆ ಹೇಳಿದ್ದಾರೆ.

ಜಾನಪದ ಸಂಸ್ಕೃತಿ ಮತ್ತು ನಾಗರಿಕ ಸಂಸ್ಕೃತಿಯಲ್ಲಿ ವ್ಯತ್ಯಾಸವಿಲ್ಲದಿದ್ದರೂ ಅವು ಸಮಾನಾಂತರವಾಗಿ ವಿಕಾಸಹೊಂದುತ್ತವೆ. ಎಂದು ಹೇಳಿದ್ದಾರೆ.

ಜಾತ್ರೆಯ ಮೂಲಪದವಾದ ಯಾತ್ರೆಗೆ ಚಲನೆ, ಪ್ರಯಣ, ಸೈನ್ಯಾಕ್ರಮಣ, ತೀರ್ಥಯಾತ್ರೆ, ಹಬ್ಬ, ಸಂತೆ, ಮೆರವಣಿಗೆ, ರಸ್ತೆ, ಮರಣ, ಸಾಧನ, ವಾಡಿಕೆ, ವಾಹನ, ನಾಟಕೀಯ, ಮನರಂಜನೆ ಎಂಬ ಅರ್ಥಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಜಾತ್ರೆಗಳ ಇತಿಹಾಸ ಸುಮಾರು ಒಂದು ಸಾವಿರವರ್ಷಗಳ ಹಿಂದಕ್ಕೆ ಬಿತ್ತರಿಸಲು ಸಾಧ್ಯವಿದೆ. ಎಂದು ದೇ. ಜ. ಗೌ. ಅವರು ಹೇಳಿದ್ದಾರೆ.

ಜಾತ್ರೆಗಳ ವರ್ಗೀಕರಣವನ್ನು ಹಲವು ವಿದ್ವಾಂಸರು ತಮ್ಮದೇ ಆದ ದೃಯನ್ನಿಟ್ಟುಕೊಂಡು ಜಾತ್ರೆಗಳ ವರ್ಗೀಕರಣ ಮಾಡಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ಎಂ.ಸಿ.ಲಕ್ಕೆರವರು ಜಾತ್ರೆಗಳನ್ನು ಎರಡು ರೀತಿಯಲ್ಲಿ ವಿಂಗಡಿಸಿದ್ದಾರೆ. (ಉತ್ತರ ಕರ್ನಾಟಕದನ್ವಯ)

೧. ಗುಡಿ ಜಾತ್ರೆಗಳು

೨. ಮಠದ ಜಾತ್ರೆಗಳು

ಕೆ. ಚಿನ್ನಪ್ಪಗೌಡ ಅವರು ತುಳುನಾಡಿನ ಅನ್ವಯ ಐದು ವಿಧಗಳಲ್ಲಿ ಜಾತ್ರೆಗಳನ್ನು ವರ್ಗೀಕರಿಸಿದ್ದಾರೆ.

೧. ಭೂತಗಳ ಜಾತ್ರೆ

೨. ಮಾರಿಜಾತ್ರೆ

೩. ಸಿಡಿ ಜಾತ್ರೆ

೪. ಕೋಟಿಚನ್ನಯ್ಯಬೈದ್ಯರ್ಕಳ ಜಾತ್ರೆ

೫. ನಾಗಮಂಡಲ ಜಾತ್ರೆ

ಹೀಗೆ ಈ ಜಾತ್ರೆಗಳ ಬಗ್ಗೆ ಹಲವಾರು ವಿದ್ವಾಂಸರು ಹಲವಾರು ದೃಯಲ್ಲಿ ವ್ಯಾಖ್ಯಾನಗಳನ್ನು ಮಾಡಿದ್ದಾರೆ. ಜಾತ್ರೆ ಹಲವರು ದೃಂದ ಹಳ್ಳಿಗರ ದೃಯಲ್ಲಿ ಹಳ್ಳಿಗರ ಜೀವನದಲ್ಲಿ ಮಹತ್ವದ ಪಾತ್ರ ವಹಿಸಿವೆ. ಎಲ್ಲಾ ಸಮುದಾಯದವರನ್ನು ರಂಜಿಸುವ ಸಮ್ಮ ಬದುಕಿನ ಒಂದು ಸಂಕೀರ್ಣ ಮತ್ತು ಸಾಮಾಜಿಕ, ಧಾರ್ಮಿಕ ಸಂಗತಿಗಳಿಂದ ಸಮನ್ವಿತವಾದ ಸಾಂಸ್ಕೃತಿಕ ಮೊತ್ತವಾಗಿದೆ. ಎಲ್ಲಾ ಜಾತಿ ಸಮುದಾಯದವರು ಉತ್ಸವದಲ್ಲಿ ಭಾವೈಕ್ಯತೆುಂದ ಭಾಗವಹಿಸುತ್ತಾರೆ. ಹಾಗೂ ಜನಪದ ರಂಗ ಕಲೆಗಳು ಸಹ ಪ್ರದರ್ಶನಗೊಳ್ಳುತ್ತವೆ.

ಭೈರಾಮರದ ಮರಿಸ್ವಾಮಿಜಾತ್ರೆಯು ಜನಪದ ಕಲೆಗಳನ್ನು ಒಳಗೊಂಡು ಜಾತ್ರೆ ಪ್ರಾರಂಭವಾಗುತ್ತದೆ. ಜಾತ್ರೆಯು ಸುಮಾರು ನಾಲ್ಕು ದಿನಗಳವರೆಗೆ ಬಹಳ ವಿಜ್ರಂಭಣೆುಂದ ಜರುಗುತ್ತದೆ. ಈ ಜಾತ್ರೆಯಲ್ಲಿ ಯಾವುದೇ ಜಾತಿ ಜನಾಂಗ ಧರ್ಮ ಎಂಬ ಬೇದ ಭಾವ ಮರೆತು ಜಾತ್ರೆಯನ್ನು ಮಾಡುತ್ತಾರೆ.

## ಅರ್ಚಕ

ದೇವರನ್ನು ಪೂಜಿಸುವ ಹಾಗೂ ದೇವಸ್ಥಾನದ ಆಸ್ತಿಪಾಸ್ತಿಗಳ ಅಧಿಕಾರವನ್ನು ಹೊಂದಿರುವವನನ್ನು ನಾವು ಅರ್ಚಕರೆಂದು ಕರೆಯುತ್ತೇವೆ. ಈ ಅರ್ಚಕ ದೇವರನ್ನು ಅಲಂಕಾರ ಮಾಡುವುದಕ್ಕಿಂತ ಮುಂಚೆ ಬೆಳಗಿನ ಜಾವ ಐದು ಗಂಟೆಗೆ ಎದ್ದು ನೀರಿನಲ್ಲಿ ಮಿಂದು ದೇವರ ಪೂಜೆಗೆ ಹೋಗುತ್ತಾನೆ. ಅವರು ಕೆಂಪುವಸ್ತ್ರವನ್ನು ಧರಿಸಿಕೊಂಡು ಪೂಜೆಯನ್ನು ಮಾಡುತ್ತಾನೆ. ಈ ಅರ್ಚಕನು ಲಿಂಗಾಯತ ಜಾತಿಗೆ ಸೇರಿದವನಾಗಿರುತ್ತಾನೆ. ಲಿಂಗಾಯತರಷ್ಟೇ ಏಕೆ ಅರ್ಚಕರಾಗಬೇಕೆಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ದೇವರು ಲಿಂಗಧಾರಣೆಯಾಗಿರುವುದರಿಂದ ಇವರು ಸಹ ಲಿಂಗಾಯತರೇ ಅರ್ಚಕರಾಗಬೇಕೆಂಬ ನಿಯನವಿದೆ. ನಾನು ಸಂದರ್ಶನ ಸಂದರ್ಭದಲ್ಲಿ ಶಾಸ್ತ್ರ ಹೇಳುವಂತಹ (ಜಂಗಮ) ಬಸವರಾಜಶಾಸ್ತ್ರೀ ಎಂಬುವವರನ್ನು ಸಂದರ್ಶಿಸಿದಾಗ ಅವರ ಪ್ರಕಾರ ಅವರ ವಂಶಸ್ಥರು ಪುಜಾರಿಗಳಾಗಿದ್ದರು. ನಾವು ಮೊದಲಿಗೆ ಮರಿಸ್ವಾಮಿ ದೇವರಿಗೆ ಪೂಜೆಯನ್ನು ಮಾಡುತ್ತಿದ್ದೆವು ಇತ್ತಿಚೆಗೆ ಆ ಅರ್ಚಕ ವೃತ್ತಿಂದ ದೂರಸರಿದಿದ್ದೇವೆ. ಎಂಬ ಹೇಳಿಕೆಯನ್ನು ಅವರು ಹೇಳಿದ್ದಾರೆ. ಅಂದಿನಿಂದ ಈ ಗುಡಿಯ ಅರ್ಚಕರು ವೀರಶೈವ ಧರ್ಮದವರೇ ವಂಶಪರಂಪರೆಯಾಗಿ ಮುಂದುವರೆಸಿಕೊಂಡು ಬರುತ್ತಿದ್ದಾರೆ.

ಈ ಅರ್ಚಕರು ಸಂಸಾರಸ್ಥರಾಗಿದ್ದು ಇವರ ವಾಸ ದೇವಸ್ಥಾನದ ಆವರಣದಲ್ಲಿಯೇ ಅವರಿಗಾಗಿ ಒಂದು ಮನೆಯನ್ನು ಕಟ್ಟಿಸಿದ್ದಾರೆ. ಈಗ ಅದೇ ಮನೆಯಲ್ಲಿ ಅರ್ಚಕರು ಇದ್ದಾರೆ. ಮೊದಲಿಗೆ ಈ ಅರ್ಚಕರು ಕೇವಲ ಜಾತ್ರೆ, ಹಬ್ಬಹರಿದಿನ ಇತ್ಯಾದಿ ವಿಶೇಷ ಸಮಯದಲ್ಲಿ ಮಾತ್ರ ಬರುತ್ತಿದ್ದರು. ಅಂತಹ ಸಂದರ್ಭದಲ್ಲಿ ಊರಿನ ಲಿಂಗಾಯತರೊಬ್ಬರು ಪೂಜೆಯನ್ನು ಮಾಡುತ್ತಿದ್ದರು. ಈಗ ಅವರು ಶಾಶ್ವತವಾಗಿ ಸ್ವಗ್ರಾಮದಲ್ಲಿಯೇ ನೆಲೆಯೂರಿ ಪೂಜೆ ಪುರಸ್ಕಾರ ಮಾಡಿಕೊಂಡಿದ್ದಾರೆ.

**ಜಾತ್ರೆಗಳಲ್ಲಿ ಬರುವ ಅಂಶಗಳು**

೧. ತೇರು

೨. ಮಜಾಲತಿ

೩. ಓಕಳಿ

೪. ಜನಪದ ಕಲೆಗಳು

ಈ ಮೇಲಿನ ಅಂಶಗಳನ್ನು ಒಳಗೊಂಡು ಜಾತ್ರೆಯು ನಡೆಯುತ್ತದೆ. ಅದಲ್ಲದೇ ಇನ್ನೂ ಅನೇಕ ಅಂಶಗಳನ್ನು ಅಂದರೆ ಆರ್ಥಿಕ ಸ್ಥಿತಿಗತಿಗಳು ಕೂಡ ಜಾತ್ರೆಯ ಸಂದರ್ಭದಲ್ಲಿ ನಡೆಯುತ್ತವೆ. ಭೈರಾಪುರದ ಮರಿಸ್ವಾಮಿ ಜಾತ್ರೆಯಲ್ಲಿ ಬೇರೆ ಬೇರೆ ರೀತಿಯ ಜನಪದಗಳನ್ನು ತನ್ನಂತರಾಳದಲ್ಲಿ ಹುದುಗಿಸಿಕೊಂಡುಜಾತ್ರೆಯು ಉತ್ಸಾಹ, ವಿಜ್ರಂಭಣೆಯಿಂದ ಜರುಗುತ್ತದೆ. ಈ ಜಾತ್ರೆಯು ಸುಮಾರು ನಾಲ್ಕು ದಿಗಗಳ ಕಾಲ ನಡೆಯುತ್ತದೆ.

ಜಾತ್ರೆಯು ಆರಂಭವಾಗುವುದಕ್ಕಿಂತ ಮುಂಚೆ ಜಾತ್ರಗೆ ಆಕರ, ಹಣಕಾಸು ಬೆಂಬಲ ಈ ತರಹದ ಉಪಕಾರ ಸೌಲಭ್ಯಗಳನ್ನು ಮೊದಲಿಗೆ ಸಿದ್ಧತೆಕಾರ್ಯ ಮಾಡುತ್ತಾರೆ. ಅಂದರೆ ಜಾತ್ರೆಯು ಒಂದು ತಿಂಗಳು ಇದೆ ಎನ್ನುವುದಕ್ಕೂ ಮುಂಚೆ ಹಣವನ್ನು ಕೂಡಿಸುವ ಸಲುವಾಗಿ ಊರಿನಲ್ಲಿ ಡಂಗೂರ (ತಮಟೆ) ಭಾರಿಸಿ, ಮನೆ, ಮನೆಗೆ ಅವರವರ ಯೋಗ್ಯತೆಗನುಸಾರವಾಗಿ ಪಟ್ಟಿ ಹಾಕುವುದರ ಮೂಲಕ ಹಣವನ್ನು ಸಂಗ್ರಹ ಮಾಡುತ್ತಾರೆ. ಹಾಗೆಯೇ ಬೇರೆ ಊರಿನ ಭಕ್ತರಿಂದಲೂ, ರಾಜಕಾರಣ ವ್ಯಕ್ತಿಗಳಿಂದಲೂ ಹಣವನ್ನು ಸಂಗ್ರಹ ಮಾಡಿ ಈ ಜಾತ್ರೆಯನ್ನು ಮಾಡುತ್ತಾರೆ. ನಂತರ ದೇವಸ್ಥಾನವನ್ನು ಸುಣ್ಣ-ಬಣ್ಣಗಳಿಂದ ಅಲಂಕೃತಗೊಳಿಸುತ್ತಾರೆ. ಊರಿನಲ್ಲಿರುವ ಎಲ್ಲಾ ದೇವಸ್ಥಾನಗಳಿಗೂ ಸುಣ್ಣ -ಬಣ್ಣಗಳನ್ನು ಹಚ್ಚಿ ಶೃಂಗರಿಸುತ್ತಾರೆ. ನಂತರ ಜಾತ್ರೆಯು ಇನ್ನೂ ಒಂದು ವಾರ ಇದೆ ಎನ್ನುವಾಗ ಗುಡಿಯ ಮುಂದಿನ ಬೇವಿನಮರಕ್ಕೆ ದೇವರ ಧ್ವಜವನ್ನು ಹಾರಿಸುತ್ತಾರೆ. ಏಕೆಂದರೆ ಈ ಧ್ವಜವನ್ನು ನೋಡಿದ ಕೂಡಲೇ ಜಾತ್ರೆ ಇದೆ ಎಂದು ಸಾಮಾನ್ಯ ಜನರಲ್ಲಿಯೂ ಕೂಡಾ ಗೋಚರವಾಗುತ್ತದೆ. ಇದು ಬೇರೆ ಊರಿನವರಿಗೂ ಕೂಡಾ ಗೊತ್ತಾಗಲಿ ಎಂಬ ಉದ್ದೇಶದಿಂದ ಈ ಧ್ವಜವನ್ನು ಹಾರಿಸಲಾಗುತ್ತದೆ.

ಜಾತ್ರೆಯು ಜರುಗುತ್ತದೆ ಎಂಬ ವಿಷಯ ಗೊತ್ತಾದ ದಿನದಿಂದ ಊರಿನ ಜನರು ಮಾಂಸಾಹಾರವನ್ನು ಬೇಯಿಸುವಂತಿಲ್ಲ. ಮತ್ತು ತಿನ್ನುವಂತಿಲ್ಲ. ಇದು ಜನರ ನಂಬಿಕೆ. ಈ ರೀತಿ ಏಕೆ ಆಚರಣೆ ಮಾಡುತ್ತಾರೆ. ಎಂದು ಸೂಕ್ಷ್ಮವಾಗಿ ಗಮನಿಸಿದಾಗ ಈ ಮರಿಸ್ವಾಮಿ ದೇವರು ಲಿಂಗಧಾರಣೆ ಹೊಂದಿದವ ಆದ್ದರಿಂದ ಮಾಂಸಃಹಾರವನ್ನು ಸೇವಿಸುವುದಿಲ್ಲ. ಒಂದು ವೇಳೆ ಸೇವಿಸಿದರೂ ಸಹ ಆರೋಗ್ಯ ಚೆನ್ನಾಗಿರುವುದಿಲ್ಲ. ಯಾವುದಾದರೂ ಆಪತ್ತಿಗೊಳಗಾಗುತ್ತಾರೆ ಎಂಬ ನಂಬಿಕೆ ಜನರಲ್ಲಿ ಬೇರೂರಿಬಿಟ್ಟಿದೆ. ಅದೇ ರೀತಿಯಾಗಿ ಜಾತ್ರೆಯ ಸಿದ್ಧತೆಗೊಂಡಂತೆ ಜನರು ಕೂಡ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಬಂಧು ಬಳಗದವರನ್ನು ಕರೆಸುವುವುದು, ಅಡುಗೆ ಸಾಮಗ್ರಿಗಳನ್ನು, ಹೊಸ, ಹೊಸ ಬಟ್ಟೆಗಳನ್ನು ಖರೀದಿಸುವುದು. ಈ ರೀತಿಯಾಗಿ ಜಾತೆಗೆ ಅಲ್ಲಿನ ಜನರು ಸಿದ್ಧತೆ ಮಾಡಿಕೊಳ್ಳುತ್ತಾರೆ.

ಜಾತ್ರೆಯ ಮೊದಲನೆಯ ದಿನದಂದು ದೇವಸ್ಥಾನದ ಸುತ್ತಮುತ್ತಲಿನ ಪರಿಸರವನ್ನು ಸ್ವಚ್ಛಗೊಳಿಸಿ, ದೇವಸ್ಥಾನದ ಮುಂದೆ ಹಂದರ (ಚಪ್ಪರ) ಹಾಕಿ ತಳೀರು ತೋರಣಗಳಿಂದ (ಅಂದರೆ ತೆಂಗಿನಗರಿ, ಬಾಳೆಗಿಡ, ಮಾವಿನಸೊಪ್ಪು ಇವುಗಳನ್ನು ಕಟ್ಟಿ) ವಿದ್ಯುತ್ ದೀಪಗಳನ್ನು ಹಚ್ಚುವುದರೊಂದಿಗೆ, ಧ್ವನಿವರ್ಧಕವನ್ನು ಹಾಕುವುದರ ಮೂಲಕ ದೇವಸ್ಥಾನವನ್ನು ಅಲಂಕಾರಗೊಳಸುತ್ತಾರೆ. ಈ ಕಾರ್ಯವನ್ನು ಊರಿನ ಭಕ್ತರೆಲ್ಲರೂ ಸೇರಿ ಕೆಲಸ ಮಾಡುತ್ತಾರೆ. ಅಂದು ಬೆಳಗ್ಗೆ ನಾಲ್ಕು ಗಂಟೆಯಿಂದಲೇ ಪೂಜಾ ಕಾರ್ಯ ಪ್ರಾರಂಭವಾಗುತ್ತದೆ. ಈ ರೀತಿಯಾಗಿ ಶ್ರೀಮರಿಸ್ವಾಮಿ ದೇವರ ಜಾತ್ರೆಯ ಪೂರ್ವ ಸಿದ್ಧತೆ ನಡೆಯುತ್ತದೆ.

ಮರಿಸ್ವಾಮಿ ದೇವರನ್ನು ಪೂಜೆಗೆಂದು ಧ್ವನಿವರ್ಧಕಗಳ ಜೊತೆಗೆ ಗಂಗೆ ಪೂಜೆಗೆ ಭೈರಾಪುರದಿಂದ ಸ್ವಲ್ಪ ದೂರದಲ್ಲಿರುವ 'ಅಘಹರಿ' ಗೆ ಹೋಗಿ ಗಂಗೆಪೂಜೆಯನ್ನು ಮಾಡಿಕೊಂಡು ಬರುತ್ತಾರೆ. ಎಲ್ಲಾ ದೇವತೆಗಳಿಗಿದ್ದಂತೆ ಬಲಿ ಕೊಡುವ ಸಂಪ್ರದಾಯ ಮರಿಸ್ವಾಮಿ ದೇವರಿಗೆ ಇರುವುದಿಲ್ಲ. ಈ ರೀತಿಯಾಗಿ ಪೂಜಾ ಕಾರ್ಯಕ್ರಮವನ್ನು ಮುಗಿಸಿಕೊಂಡು ಬಂದು ಗುಡಿದುಂಬಿಸುತ್ತಾರೆ. ಇಂತಹ ಸಂದರ್ಭದಲ್ಲಿ ಒಂಭತ್ತು ಜನ ಮುತ್ತೈದೆಯರು ಕಳಸವನ್ನು ಹಿಡಿಯುವುದರ ಜೊತೆಗೆ ಐದು ಜನರು ಅಘಹರಿ ನೀರು ತುಂಬಿದ ಕೊಡವನ್ನು ಹೊತ್ತು ತರುತ್ತಾರೆ. ಈ ಎಲ್ಲ ಕಾರ್ಯಗಳನ್ನು ಹೆಚ್ಚಾಗಿ ಲಿಂಗಾಯತ ಜನಾಂಗದರು ಮಾಡುತ್ತಾರೆ. ಎಲ್ಲಾ ಜಾತಿಯ ಜನರು ಜಾತ್ರೆಯಲ್ಲಿ ಪಾಲ್ಗೊಂಡಿದ್ದರೂ ಸಹ ಇಂತಹ ಪೂಜಾ ಕಾರ್ಯಕ್ರಮಗಳನ್ನು ಮಾತ್ರ ಲಿಂಗಾಯತ ಜನರೇ ಮಾಡುತಾರೆ. ಮರಿಸ್ವಾಮಿ ದೇವರ ಜಾತ್ರೆಯ ಮುಂಚಿತವಾಗಿ ತೇರು ಕಟ್ಟುವ ಕಾರ್ಯ ಮಾಡುತ್ತಾರೆ. ಅಂದು ತೇರಿನ ಅರ್ಧಭಾಗವನ್ನು ಬಿಚ್ಚದೆ ಹಾಗೆ ಇದ್ದ ತೇರನ್ನು ಹೊರಗಡೆ ತಂದು ಅದನ್ನು ನೀರಿನಿಂದ ತೊಳೆದು, ಪೂರ್ತಿಯಾಗಿ ತೇರನ್ನು ಕಟ್ಟುವ ಕಾರ್ಯಗಳನ್ನು ಊರಿನ ಬಡಿಗ ಜನಾಂಗದವರು ಮಾಡುತ್ತಾರೆ. ನಂತರ ಅದಕ್ಕೆ ಬಣ್ಣ ಹಚ್ಚಿ, ಬಣ್ಣ ಬಣ್ಣದ ಕಾಗದಗಳನ್ನು ಹಚ್ಚಿ ತೇರನ್ನು ಶೃಂಗಾರಗೊಳಿಸುತ್ತಾರೆ. ಹಾಗೆಯೇ ಆ ದಿನದಂದು ದೇವರ ಉಡಿಗೆ-ತೊಡಿಗೆಯಲ್ಲಿಯೂ ಸಹ ವಿಶೇಷವಿರುತ್ತದೆ. ದೇವರಿಗೆ ಹೊಸ ಬಟ್ಟೆಗಳನ್ನು ಧರಿಸಿ, ಆಭರಣಗಳನ್ನು ಹಾಕಿ ಪೂಜೆ ಮಾಡುತ್ತಾರೆ. ಆ ದಿನದಂದು ದೇವರಿಗೆ ಯಜ್ಞಯಾಗಾದಿಗಳನ್ನು ಮಾಡಿಸುತ್ತಾರೆ.

## ೧. ತೇರು

ತೇರಿಗೆ ಬಂಡಿ, ಕುರ್ಜ, ವಾನ್ಯೇವು ಎಂಬ ಹೆಸರುಗಳಿವೆ. ತೇರು ದ್ರಾವಿಡ ಶಬ್ಧ. ಇದಕ್ಕೆ ತಮೀಳು, ತೆಲುಗು, ಮಲೆಯಾಳಂ, ತುಳುಭಾಷೆಗಳಲ್ಲಿ ಜ್ಞಾತಿ ಪದಗಳಿವೆ. ತೇರಿನ ವಿವರಗಳಲ್ಲಿ ಚಕ್ರ ಅಲಂಕಾರ ಭಾಗ ಶಿಖರ, ಕಳಶಗಳಿದ್ದು, ಗೋಪುರಾಕಾರದ ಶೈಲಿಯ ರಥ ವಿಜಯನಗರದಿಂದೀಚೆ ಬಳಕೆಗೆ ಬಂದಿರಬೇಕೆಂಬುದು ಹಂ.ಪ.ನಾ ಅವರ ವಾದ. "ರಥವೆಂದರೆ ಸಾಮಾನ್ಯವಾಗಿ ನಾವು ಏರಿ ಹೋಗುವುದು ವಾಹನ ಆದರೆ ಪದದ ಮೂಲಾರ್ಥ ಆಟವಾಡುವುದು"

ಈ ಎಲ್ಲಾ ಅರ್ಥಗಳ ಹಿನ್ನೆಲೆಯಲ್ಲಿ ಒಂದು ಊಹೆ ಹುಟ್ಟುವಂತಿದೆ. 'ಕುರು' ಎಂದರೆ ಕಿರುಬೆಟ್ಟ, ದಿಣ್ಣೆ ಎಂದರ್ಥ. ಎಷ್ಟೇ ಕುರುಹಗಳಿದ್ದರೂ ಕನ್ನಡಿಗರು ಕೃಕರಾಗಿ ಬಯಲುಗಳಲ್ಲಿ ನೆಲೆ ನಿಂತು ನಂತರ ಕುರುಗಳನ್ನು ನೆನಪಿಸುವ ತೇರು ಶಿಖರಗಳನ್ನು ನಿರ್ಮಿಸಿದರೇ? ಕುರುಜು ಎಂಬಲ್ಲಿಯ 'ಕುರು' ಈ ಊಹೆಗೆ ಆಧಾರವಾಗುತ್ತದೆ. ಕುರುಗಳಿಂದ ಬಯಲಿಗೆ ಬಂದದ್ದನ್ನು ಸಂಕೇತಿಸಲು ತೆರೆ ತೇರಳೆಯಲಾಗುವುದೇ ? ಅಥವಾ ಪಶುಪಾಲಕರ ಜೊತೆ ಸಮನ್ವಯವನ್ನು ಸಾಧಿಸಿದ ನಂತರ ಕೃಗೆ ತೊಡಗಿದಾಗ ರಾಶಿಯ ಸಂಕೇತವಾಗಿ ತೇರನ್ನು ರಚಿಸಿರಬಹುದೇ? ಜಾತ್ರೆ ಸಮೃದಿಗೆ ಆಶಿಸಿ ಮಾಡುವ ಆಚರಣೆಯಾದ್ದರಿಂದ ಇಂತಹ ಊಹೆಗಳಿಗೆ ಅವಕಾಶವಿದೆ.

## ತೇರು ಕಟ್ಟುವ ಕಾರ್ಯ

ತೇರನ್ನು ಕಟ್ಟುವ ಕಾರ್ಯವನ್ನು ಈ ಗ್ರಾಮದ ಬಡಿಗರು ಮಾತ್ರ ಮಾಡುತ್ತಾರೆ. ಆ ದಿನದಂದು ಆತನು ಉಪವಾಸವಿದ್ದು (ಒಪ್ಪತ್ತಿನಿಂದ) ಕೆಲಸ ನಿರ್ವಹಿಸುತ್ತಾನೆ. ಕಲಸದ ಸಂದರ್ಭದಲ್ಲಿ ಸಹಾಯಕ್ಕಾಗಿ ತನ್ನ ಮಕ್ಕಾಳನ್ನಾಗಲಿ ಬೇರೆ ಯಾರನ್ನಾದರೂ ತೆಗೆದುಕೊಂಡು ಕೆಲಸವನ್ನು ಪೂರ್ಣಗೊಳಿಸುತ್ತಾರೆ. ಇದಕ್ಕೆ ಪ್ರತಿಯಾಗಿ ಅವರು ಹಣವನ್ನು ಪಡೆಯಯುವುದಿಲ್ಲ ಏಕೆಂದರೆ ಇದು ದೇವರಕೆಲಸಮಾಡುವುದೆಂದರೆ ಪುಣ್ಯದ ಕೆಲಸ ಎಂಬ ನಂಬಿಕೆ ಅವರದಾಗಿರುವುದರಿಂದ ಹಾಗೂ ಈ ಕೆಲಸ ಮಾಡುವುದರಿಂದ ದೇವರಿಗೆ ತಮ್ಮ ಭಕ್ತಿಯನ್ನು ಮುಟ್ಟಿಸಿದಂತಾಗುತ್ತದೆ. ಇದರಿಂದ ಅವರಿಗೆ ಜೀವನದಲ್ಲಿ ತಾವು ಅಂದುಕೊಂಡ ಕೆಲಸಗಳು ಈಡೇರುತ್ತವೆ. ಈ ರೀತಿಯ ನಂಬಿಕೆ ಹಿಂದಿನಿಂದಲೂ ಅವರ ಪೂರ್ವಜರಲ್ಲಿ ನಡೆದುಕೊಂಡು ಬಂದಿದೆ. ಅದನ್ನೇ ಈಗಿನವರು ಮುಂದುವರೆಸಿಕೊಂಡು ನಡೆದಿದ್ದಾರೆ. ಎಂದು ಇದರಿಂದ ಸ್ಪಷ್ಟವಾಗುತ್ತದೆ. ತೇರು ಕಟ್ಟುವ ಮುನ್ನ ತನ್ನ ಸಾಮಗ್ರಿಗಳನ್ನು ದೇವರ ಮುಂದೆ ಪೂಜೆಗಿಟ್ಟು, ಅಕ್ಕಿ, ಬೇಳೆ, ಎಲೆ, ಅಡಿಕೆ ಇತ್ಯಾದಿ (ಉಲ್ಪಿ) ಗಳನ್ನಿಟ್ಟು ಪೂಜೆ ಮಾಡಿಸಿ ನಂತರ ತೇರು ಕಟ್ಟುವ ಕೆಲಸಕ್ಕೆ ಪ್ರಾರಂಭಿಸುತ್ತಾರೆ. ಈ ಕೆಲಸವನ್ನು ಭೈರಾಪುರದಲ್ಲಿ ಸುಮಾರು ವರ್ಷಗಳಿಂದಲೂ ಶ್ರೀಮರಿಯಪ್ಪ ಮತ್ತು ರಾಘವೇಂದ್ರ ಇವರು ನಿರ್ವಹಿಸುತ್ತಾ ಬಂದಿದ್ದಾರೆ. ಆದರೆ ಈಗ ಮರದ ತೇರಿನ ಬದಲಾಗಿ ೨೦೦೬-೦೭ನೇಸಾಲಿನಿಂದ ಕಬ್ಬಿಣದ ತೇರನ್ನು ಮಾಡಿಸಿರುವುದರಿಂದ ಮರದ ತೇರನ್ನು ಕಟ್ಟುವ ಕೆಲಸ ನಿಂತಂತಾಗಿದೆ. ಈ ಕಬ್ಬಿಣದ ತೇರು ಪೂರ್ತಿಯಾಗಿ ಕಬ್ಬಿಣದಿಂದ ಕೂಡಿದ್ದಾಗಿದೆ. ಈ ಕಬ್ಬಿಣದ ತೇರು ಎಲೆಕ್ಟ್ರಾನಿಕ್ ಸಾಮಗ್ರಿಗಳಿಂದ ಕೂಡಿದ್ದಾಗಿದೆ. ಭೈರಾಪುರದ ಮರಿಸ್ವಾಮಿದೇವರ ತೇರು ಉತ್ಸವಕ್ಕೆ ಬಣ್ಣ, ಸೀರೆ, ಇತ್ಯಾದಿಗಳಿಂದ

ಅಲಂಕಾವನ್ನು ಆ ಊರಿನ ಜನರು ಒಂದುಗೂಡಿ ಶೃಂಗರಿಸುತ್ತಾರೆ. ಅದೇ ರೀತಿಯಾಗಿ ತೇರು ಸಂದರ್ಭದಲ್ಲಿ ದೀಪದ ಬೆಳಕನ್ನು ಅಗಸ ಜನಾಂಗದವರು ಪೊಂಜು ಹಿಡಿಯುವುದರ ಮೂಲಕ ನಿರ್ವಹಿಸುತ್ತಾರೆ. ಈ ಕಾರ್ಯ ಪ್ರತಿ ವರ್ಷ ಅಗಸ ಜನಾಂಗಕ್ಕೆ ಸೇರಿದವರದಾಗಿರುತ್ತದೆ.

ಈ ರಥೋತ್ಸವವು ಮದ್ಯ ರಾತ್ರಿ ಸುಮಾರು ೧೨:೦೦ಗಂಟೆಗೆ ನಡೆಯುತ್ತದೆ. ಅಂದು ಉರಿನ ಹುಡಗರಿಂದ ಮುದುಕರವರೆಗೂ ರಾತ್ರಿವಿಡೀ ಮಲಗದೇ ನಿದ್ದೆಗೆಟ್ಟು ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಇದು ಒಂದು ವಿಶೇಷವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಪ್ರತಿಯೊಂದು ಊರುಗಳಲ್ಲಿ ರಥೋತ್ಸವವು ಸಾಯಂಕಾಲ ಸುಮಾರು ೬:೦೦ ಗಂಟೆಯ ಸಮಯದಲ್ಲಿ ನೆಡೆದರೆ ಇದು ಮದ್ಯ ರಾತ್ರಿ ನಡೆಯುವುದೇ ಆಗಿದೆ. ಈ ರಥವನ್ನು ಏಳೆಯುವಾಗ ರಥಕ್ಕೆ ಬಾಳೆಹಣ್ಣುಗಳನ್ನು ಎಸೆಯುತ್ತಾರೆ. ಕಳ್ಳಕಾರರಿಗೆ ಗೊತ್ತಾಗಬಾರದೆಂದು ಈ ತೇರನ್ನು ಮದ್ಯರಾತ್ರಿಯಲ್ಲಿ ಏಳೆಯುತ್ತಾರೆ ಎಂಬ ಮಾತುಗಳು ಕೇಳಿ ಬರುತ್ತವೆ. ಈಗ ಅಂದರೆ ಹೊಸ ತೇರನ್ನು ಮಾಡಿಸಿದಾಗಿನಿಂದ ೨೦೦೬-೦೭ ನೇ ಸಾಲಿನಿಂದ ಸಾಯಂಕಾಲ ಸುಮಾರು ೬:೦೦ಗಂಟೆಗೆ ಬಹಳ ವಿಜ್ರಂಭಣೆಯಿಂದ ನಡೆಯುತ್ತದೆ.

ಈ ತೇರಿನಲ್ಲಿ ಇಟ್ಟಿರುವ ಮರಿಸ್ವಾಮಿ ದೇವರ ವಿಗ್ರಹಕ್ಕೆ ರುಮಾಲು, ಪಂಚೆ, ಕೀರಿಟ, ಕೊರಳಲ್ಲಿ ಆಭರಣದ ವಸ್ತುಗಳನ್ನು ಹಾಕಿ, ಮುಂದೆ ಆ ದೇವರ ಅರ್ಚಕರು ಕೊರಳಲ್ಲಿ ಆಭರಣ, ತೆಲೆಗೆ ಕೆಂಪುವಸ್ತ್ರದರುಮಾಲು ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಇಬ್ಬರು ತರುಣರು ಚಾಮರವನ್ನು ಬೀಸುತ್ತಾ ಸುಮಾರು ೨೦೦ ಮೀಟರ್ ಹಗ್ಗದೊಂದಗಿನ ಸಹಾಯದಿಂದ ಜನರು ತೇರನ್ನು ಮುಂದೆ ಎಳೆಯುತ್ತಾರೆ. ಮೆರವಣಿಗೆಯು ಡೊಳ್ಳು, ಮೇಳ ಹಿಂದೆ ಶಹನಾಯ ಮೇಳ ಹಾಗೂ ಭಜನಾ ಮೇಳಗಳಿರುತ್ತವೆ. ತೇರಿನ ಹಿಂದೆ ಮುತ್ತೈದೆಯರು ಆರತಿಯನ್ನು ಹಿಡಿದು ಮರಿಸ್ವಾಮಿ ದೇವರ ಕುರಿತು ಯುವಕರು ಕೋಲಾಟದ ಪದಗಳನ್ನು ಹಾಡುತ್ತಾರೆ. ಈ ರೀತಿಯಾಗಿ ರಥೋತ್ಸವವು ಜನಪದ ಕಲೆಗಳಿಂದ ನಡೆಯುತ್ತದೆ.

ಈ ರೀತಿಯಾಗಿ ಮರಿಸ್ವಾಮಿದೇವಸ್ಥಾನದಿಂದ ಸುಮಾರು ಅರ್ಧ ಕಿ.ಮೀ. ದೂರದಲ್ಲಿರುವ ಪಾದಗಟ್ಟೆ ಗುಡಿ ಇದೆ. ಆಗುಡಿಯವರೆಗೂ ರಥೋತ್ಸವವು ಸಾಗುತ್ತದೆ. ಶ್ರೀಮರಿಸ್ವಾಮಿ ದೇವರಿಗೆ ಹರಕೆ ಹೊತ್ತವರು ಹೂವಿನ ಹಾರಗಳನ್ನು ಮಗುವಿನ ತೂಕದಷ್ಟು ತೇರಿಗೆ ಹಾಕುತ್ತಾ ತಮ್ಮ ಹರಕೆಗಳನ್ನು ಮುಟ್ಟಿಸುತ್ತಾರೆ. ಅದೇ ರೀತಿಯಾಗಿ ರಥೋತ್ಸವವು ಜರುಗಿದ ಸಂದರ್ಭದಲ್ಲಿ ಬಾಳೆಹಣ್ಣು, ಮೆಣಸು, ಬೆಲ್ಲ, ಮಂಡಕ್ಕಿ ಮುಂತಾದವುಗಳನ್ನು ತೇರಿನ ಮೇಲೆ ಎಸೆಯುತ್ತಾರೆ. ಎಲ್ಲಾ ದೇವತೆಗಳ ಜಾತ್ರೆಗಳ ಸಂದರ್ಭದಲ್ಲಿ ಕುರಿ, ಕೋಳಿಮಾಂಸ, ಭಂಗಿಗಳನ್ನು ಅರ್ಪಿಸುತ್ತಾರೆ ಆದರೆ ಮರಿಸ್ವಾಮಿ ಜಾತ್ರೆಯಲ್ಲಿ ಪ್ರಾಣಿ ಬಲಿ ಕೊಡುವ ಪದ್ಧತಿ ಇಲ್ಲ. ಗಂಡು ಮಗುವಾದರೆ ಆ ದೇವರ ಹೆಸರನ್ನಿಡುವುದು ಪುರುಷಪ್ರಧಾನ ಸಮಾಜದ ಲಕ್ಷಣವಾಗಿದೆ. ಈ ರೀತಿಯಾಗಿ ಭೈರಾಪುರದ ಮರಿಸ್ವಾಮಿ ದೇವರ ರಥೋತ್ಸವವು ವರ್ಷದ ಅವಧಿಯು ಫೆಬ್ರವರಿ ಅಥವಾ ಮಾರ್ಚ ತಿಂಗಳಲ್ಲಿ ಸರ್ವೇಸಾಮಾನ್ಯವಾಗಿ ಜರುಗುತ್ತದೆ.

## ೨. ಪಾನಕ ಬಂಡಿ

ಭೈರಾಪುರದ ಮರಿಸ್ವಾಮಿ ಜಾತ್ರೆಯ ಸಂದರ್ಭದಲ್ಲಿ ತೇರು ಆದ ಮಾರನೆಯ ದಿನವೇ ಪಾನಕ ಬಂಡಿಯನ್ನು ಹೂಡುತ್ತಾರೆ. ಪ್ರತಿ ವರ್ಷವೂ ಈ ರೀತಿಯ ಕಾರ್ಯಕ್ರಮ ನಡೆಯುತ್ತದೆ. ಇದು ಭಕ್ತರ ಹರಕೆ ಮುಟ್ಟಿಸುವದಾಗಿರುತ್ತದೆ. ಈ ಪದ್ಧತಿಯೂ ಪೂರ್ವಜರಿಂದಲೇ ನಡೆದುಕೊಂಡು ಬಂದಿದೆ. ಹರಕೆಗಳನ್ನು ಮುಟ್ಟಿಸುವ ರೀತಿಗಳು ಬೇರೆ ಬೇರೆ ಯಾಗಿರುತ್ತವೆ. ಏಕೆಂದರೆ ಕೆಲವರು ಬೆಳ್ಳಿ, ಬಂಗಾರ, ಹಣ, ವಸ್ತ್ರ, ಹಾಗೂ ಪಾನಕ ಬಂಡಿಗಳನ್ನು ಹೂಡುವುದರ ಮೂಲಕ ತಮ್ಮ ತಮ್ಮ ಹರಕೆಗಳನ್ನು ಮುಟ್ಟಿಸುತ್ತಾರೆ.

ತೇರು ಮುಗಿದ ಮಾರನೇ ದಿನವೇ ಈ ಪಾನಕದ ಗಾಡಿಯನ್ನು ಮನೆಯಿಂದ ದೇವಸ್ಥಾನದವರೆಗೆ ಧ್ವನಿ ಮಾಧ್ಯಮಗಳು ಮುತ್ತೈದೆಯರು ಕಳಸ ಹಿಡಿದುಕೊಂಡು ಮೆರವಣಿಗೆಯ ಮೂಲಕ ದೇವಸ್ಥಾನಕ್ಕೆ ಬಂದು ಪೂಜೆಕಾರ್ಯಕ್ರಮ ಮುಗಿಸಿಕೊಂಡು ಪಾನಕವನ್ನು ಎಲ್ಲಾ ಜನರಿಗೂ ಹಂಚುತ್ತಾರೆ. ಆದರೆ ಮಾದಿಗ ಸಮುದಾಯದಲ್ಲಿ ಈ ರೀತಿ ಆಚರಣೆ ಮಾಡಿದರೂ ಅವರ ಹರಕೆಪರೋಕ್ಷದ ರೀತಿಯಲ್ಲಿ ಪಾನಕಬಂಡಿಯನ್ನು ಬೇರೆ ಜಾತಿಯವರ ಮೂಲಕ ಹರಕೆಗಳನ್ನು ಮುಟ್ಟಿಸುತ್ತಾರೆ. ಅಂದರೆ ಪಾನಕಕ್ಕೆ ಬೇಕಾದ ಬೆಲ್ಲ, ಶುಂಠಿ, ನೀರು, ಪೂಜಾ ಸಾಮಾನುಗಳನ್ನು ಅಂಗಡಿಗಳಿಂದ ತರಿಸಿ ಬಂಡಿಯನ್ನು ತಳೀರು ತೋರಣಗಳಿಂದ ಶೃಂಗರಿಸಿ, ಬೇರೆ ಜಾತಿಯವರಿಗೆ ಕೊಡುವುದರ ಮೂಲಕ ಪಾನಕ ಬಂಡಿಗಳ ಮೆರವಣಿಗೆಯ ಕಾರ್ಯವನ್ನು ಈ ರೀತಿಯಾಗಿ ಪೂರ್ತಿಗೊಳಿಸುತ್ತಾರೆ.

ಪಾನಕ ಬಂಡಿಯನ್ನು ಕೇವಲ ಅದೇ ಊರಿನವರು ಮಾತ್ರ ಹೂಡದೇ ಅಕ್ಕಪಕ್ಕದ ಊರಿನವರು ಸಹ ಪಾನಕ ಬಂಡಿಯನ್ನು ಶೃಂಗರಿಸಿಕೊಂಡು ಧ್ವನಿ ವರ್ಧಕಗಳೊಂದಿಗೆ ಮೆರವಣಿಗೆಯ ಮೂಲಕ ಭೈರಾಪುರದ ಶ್ರೀಮರಿಸ್ವಾಮಿ ದೇವರ ಗುಡಿಗೆ ಬರುತ್ತಾರೆ.

ಉದಾ: ಗುಡ್ಡದಹಳ್ಳಿ ಗ್ರಾಮದಿಂದ ಬಂದಂತಹ ಪಾನಕ ಗಾಡಿಗಳು ದೇವರಗುಡಿಯನ್ನು ಮೂರು ಬಾರಿ ಪ್ರದಕ್ಷಿಣೆ ಹಾಕುತ್ತಾ ಪೂಜೆಯನ್ನು ಸಲ್ಲಿಸಿ ಪಾನಕವನ್ನು ಅರ್ಚಕರು ಮೊದಲು ಹರಕೆ ಹೊತ್ತವರಿಗೆ ಹಾಕುತ್ತಾರೆ. ನಂತರ ಅದನ್ನು ಆ ಊರಿನ ಎಲ್ಲಾ ಭಕ್ತರಿಗೂ ಹಾಕುತ್ತಾರೆ.

ಹೀಗೆ ವರ್ಷಕ್ಕೊಮ್ಮೆ ಪಾನಕ ಬಂಡಿಯನ್ನು ಹೂಡುತ್ತಾರೆ. ಆದರೆ ಪಲ್ಲಕ್ಕಿಯ ಉತ್ಸವದ ದಿನದಂದು ಪಲ್ಲಕ್ಕಿ ಬಂಡಿಯ ಹಿಂದುಗಡೆ ಪಾನಕಬಂಡಿಯನ್ನು ಸಹ ಹೂಡುತ್ತಾರೆ. ಉತ್ಸವದಲ್ಲಿ ಪಾಲ್ಗೊಂಡ ಎಲ್ಲಾ ಭಕ್ತಾಧಿಗಳಿಗೂ ಈ ಪಾನಕವನ್ನು ಹಾಕುತ್ತಾರೆ. ಈ ರೀತಿಯಾಗಿ ಪಾನಕಬಂಡಿಯನ್ನು ಈ ಜಾತ್ರೆಯಲ್ಲಿ ಹೂಡುತ್ತಾರೆ.

## ೩. ಮಜಾಲ್ತಿ

ರಥೋತ್ಸವ ಆದ ಮರುದಿನ ನಡೆಯುವ ಕಾರ್ಯಕ್ರಮವೇ ಮಜಾಲ್ತಿ. ಅಂದರೆ ರಥೋತ್ಸವ ಮುಗಿದ ೨೪ ಗಂಟೆಗಳ ಅವಧಿಯಲ್ಲಿ ಶ್ರೀಮರಿಸ್ವಾಮಿ ದೇವರ ಪಲ್ಲಕ್ಕಿಯನ್ನು ದೇವರ ಮಠದಿಂದ ದೇವಸ್ಥಾನದ ಹೊರಬಾಗಕ್ಕೆ ತಂದು ದೇವರನ್ನು ನಾನಾ ವಿಧದಲ್ಲಿ ಭಕ್ತಿಂದ ನಿದ್ರೆ ಮಾಡದೇ ಕೊಂಡಾಡುವುದು. ಇದನ್ನೇ ನಾವು ಮಜಾಲ್ತಿ ಎಂದು ಕರೆಯುತ್ತೇವೆ.

ರಥೋತ್ಸವ ನಡೆದ ೨೪ ಗಂಟೆಗಳಲ್ಲಿ ಪಲ್ಲಕ್ಕಿಯನ್ನು ಸಿದ್ದಪಡಿಸುತ್ತಾರೆ. ಈ ಪಲ್ಲಕ್ಕಿಯನ್ನು ರಾತ್ರಿ ೧೧:೦೦ರಿಂದ ೧೨:೦೦ ಗಂಟೆಯ ಸಮಯದಲ್ಲಿ ದೇವಸ್ಥಾನದಿಂದ ನಂದಿಕೋಲು ಕುಣಿಸುತ್ತಾ ತಮಟೆ, ಡೋಳು ಬಡಿಯುತ್ತಾ ಸ್ತ್ರೀಯರು ಹಾಡು ಹಾಡುತ್ತಾ ಹೆಂಗಳೆಯರು ಕೋಲಾಟ ಹಾಕುತ್ತಾ ಮೆರವಣಿಗೆಯ ಮೂಲಕ ಪಲ್ಲಕ್ಕಿಯನ್ನು ಹೊರಗಡೆ ತರುತ್ತಾರೆ. ಈ ಪಲ್ಲಕ್ಕಿಯನ್ನು ಹೊತ್ತುಕೊಂಡು ಬರುವುದು ಕೇವಲ ವೀರಶೈವ ಧರ್ಮದವರೊಂದೆ, ಬೇರೆ ಸಮುದಾಯದವರು ಈ ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಾರೆಯೇ ವಿನಃ ಪಲ್ಲಕ್ಕಿಯನ್ನು ಹೊತ್ತುಕೊಳ್ಳುವುದಾಗಲಿ ಮಾಡುವುದಿಲ್ಲ. ಮಂತ್ರವನ್ನು ಪಠಿಸುವವರು ಸಹ ಜಂಗಮರು ಅಂದರೆ ಊರಿನ ಬಸವರಾಜಶಾಸ್ತ್ರಿಗಳು ಇವರು ಯಾವಾಗಲೂ ಮಂತ್ರವನ್ನು ಪಠಿಸುತ್ತಾ ಪಲ್ಲಕ್ಕಿಯನ್ನು ಇಳಿಸುವವರೆಗೂ ಮಂತ್ರವನ್ನು ಪಠಿಸುತ್ತಾರೆ.

ಮಾದಿಗ ಸಮುದಾಯದವರು ಈ ಮೆರವಣಿಗೆಯಲ್ಲಿ ತಮಟೆ ಬಾರಿಸುವುದುಮಾತ್ರ ಇನ್ನಾವುದೇ ಕೆಲಸವ್ನು ಮಾಡುವಂತಿಲ್ಲ.ಹಾಗೂ ಆ ಪಲ್ಲಕ್ಕಿಯನ್ನು ಮುಟ್ಟುವಂತಿಲ್ಲ.ಏಕೆಂದರೆ ಮಾದಿಗರು ಮಾಂಸಹಾರಿಗಳು, ಕೀಳುದರ್ಜೆಯ ಜನಾಂಗದವರು ಅದರಲ್ಲಿ ಮರಿಸ್ವಾಮಿ ದೇವರು ವೀರಶೈವ ಪಂಥದವ, ಲಿಂಗಧಾರಣೆಯವನಾದ್ದರಿಂದ ಈ ಜನಾಂಗದವರು ಅದರ ಹತ್ತಿರ ಸುಳಿಯುವುದಿಲ್ಲ. ಈ ರೀತಿಯ ಆಚರಣೆ ಈ ಊರಿನಲ್ಲಿ ನೆಡೆಯುತ್ತದೆ. ಈ ಪಲ್ಲಕ್ಕಿ ಜಾಗರಣೆಯ ಸಂದರ್ಭದಲ್ಲಿ ಅಂದು ದೇವರನ್ನು ಭಜನೆ ಪದಗಳ ಮೂಲಕ ಭಕ್ತಿಯಿಂದ ಹಾಡುವಂತವರೆಂದರೆ ಮಾದಿಗರು, ಗೊಲ್ಲರು, ನಾಯಕರು, ವೀರಶೈವರು ಇತ್ಯಾದಿ ಜನಾಂಗದವರು.

ಮಜಾಲ್ತಿಯಲ್ಲಿ ಸುಮಾರು ರಾತ್ರಿ ೧೦:೦೦ ಗಂಟೆಗೆ ಪ್ರಾರಂಭವಾಗುತ್ತದೆ. ಅಂದು ಊರಿನ ಎಲ್ಲಾ ಜನರು ಗುಡಿಯ ಹತ್ತಿರ ಮಲಗುತ್ತಾರೆ. ಕೇವಲ ಅದೇ ಊರಿನವರಲ್ಲದೇ ಬೇರೆ ಊರಿನ ಗುಡ್ಡದಹಳ್ಳಿ, ಕಾಟನಾಯಕಿನಹಳ್ಳಿ, ಚಿಕ್ಕೇರಹಳ್ಳಿ, ನಾಗಸಮುದ್ರ, ಭಟ್ರಹಳ್ಳಿ, ಆಮಕುಂದಿ ಮತ್ತು ಬಳ್ಳಾರಿ ಈ ಪ್ರಾಂತಗಳಿಂದಲೂ ಸಹ ಭಕ್ತಾದಿಗಳು ಬಂದು ಆ ದಿವಸ ನಿದ್ರೆ ಮಾಡುತ್ತಾರೆ. ಆ ದಿನ ರಾತ್ರಿ ಒಂದೇ ಬಣದವರಲ್ಲದೆ ಹಲವಾರು ಬಣದವರು ಎದುರು-ಬದುರು ಕೂತು ಭಜನೆ ಮಾಡುವ ಸಂಪ್ರದಾಯವಿರುತ್ತದೆ. ಬೆಳಿಗ್ಗೆ ಸೂರ್ಯ ಉದುಸುವವರೆಗೂ ಪೈಪೋಟಿ ಮೇಲೆ ಕಾಟನಾಯಕನಹಳ್ಳಿ,

ಗುಡ್ಡದಹಳ್ಳಿ ಕೆಳಗಳಹಟ್ಟಿ ಮತ್ತು ಭೈರಾಪುರ ಈ ನಾಲ್ಕು ಊರಿನವರು ಅಂದು ಭಜನೆಯಲ್ಲಿ ಪೈಪೋಟಿ ಮಾಡುತ್ತಾರೆ. ಆ ದಿನ ಎಲ್ಲರು ಎದ್ದು ಇದರಲ್ಲಿ ಆಸಕ್ತಿಂದ ಬಾಗ ವಹಿಸುತ್ತಾರೆ.

## ೪. ಪಲ್ಲಕ್ಕಿ ಉತ್ಸವ

ರಾತ್ರಿಯಲ್ಲಾ ಜಾಗಹರಣೆ ಅಥವಾ ಮಜಾಲ್ತಿ ಮಾಡಿ ನಂತರ ಮನೆಗೆ ಹೋಗಿ ಸ್ನಾನಮಾಡಿಕೊಂಡು ಪುನಃ ಪಲ್ಲಕ್ಕಿ ಉತ್ಸವಕ್ಕೆ ಮುಗಿಬೀಳುತ್ತಾರೆ. ಈ ಉತ್ಸವದ ಬೆಳಗಿನಜಾವ ೭:೦೦ ಗಂಟೆಗೆ ಪ್ರಾರಂಭವಾಗುತ್ತದೆ. ಪಲ್ಲಕ್ಕಿ ಉತ್ಸವ ಪ್ರಾರಂಭವಾಗುವುದಕ್ಕಿಂತ ಮುಂಚೆ ದೇವರಿಗೆ ಪೂಜೆಯನ್ನು ಮಾಡಿ ಪಲ್ಲಕ್ಕಿಯನ್ನು ಎತ್ತಿನ ಬಂಡಿಯಲ್ಲಿ ಇಡುತ್ತಾರೆ. ಅಂತಹ ಸಂದರ್ಭದಲ್ಲಿ ಶ್ರೀ "ಹರಹರ ಮಹಾದೇವ ಶಂಭೋಶಂಕರ" ಎಂಬ ನಾಮಾವಳಿಯನ್ನು ಎಲ್ಲರಬಾಯಲ್ಲಿ ಬರುತ್ತದೆ. ಈ ಪಲ್ಲಕ್ಕಿಯನ್ನು ಎತ್ತಿನ ಗಾಡಿಯಲ್ಲಿ ಇಟ್ಟು ಮೆರವಣಿಗೆ ಸಾಗಿಸುತ್ತಾರೆ.

ಮೆರವಣಿಗೆಯ ಸಂದರ್ಭದಲ್ಲಿ ಅರ್ಚಕನು ಪಲ್ಲಕ್ಕಿಯ ಮುಂದುಗಡೆ ಇರುತ್ತಾನೆ. ಈತನ ಕೈಯಲ್ಲಿ ಒಂದು ಕೋಲು, ಕೆಂಪು ಲುಂಗಿ, ಕೆಂಪುಪೇಟವನ್ನು ತಲೆಗೆ ಸುತ್ತಿಕೊಂಡು ಶ್ವೇತಾವರ್ಣದ ಶರ್ಟನ್ನು ಧರಿಸಿಕೊಂಡು ಕೊರಳಲ್ಲಿ ಹೂವಿನ ಮಾಲೆಯನ್ನು ಹಾಕಿರುತ್ತಾರೆ. ಆತನಿಗೆ ಎಡಕ್ಕೆ ಮತ್ತು ಬಲಕ್ಕೆ ಇಬ್ಬರು ಚಾಮರವನ್ನು ಬೀಸುತ್ತಿರುತ್ತಾರೆ. ಈ ಅರ್ಚಕ ಅಂದು ರಸ್ತೆಯ ಮೇಲೆ ಮಡಿ ಬಟ್ಟೆಯನ್ನು ಹಾಸಿದುದರ ಮೇಲೆ ನಡೆಯುತ್ತಾರೆ. ಈ ಕೆಲಸವನ್ನು ಅಂದರೆ ಮಡಿ ಬಟ್ಟೆಯನ್ನು ಅಗಸರು ಹಾಸುತ್ತಾರೆ. ಇದೊಂದೆ ಅಲ್ಲದೆ ಮುಂದೆ ದೀಪದ ಪಂಜನ್ನು ಹಿಡಿಯುತ್ತಾರೆ. ಇದೊಂದು ವೈಜ್ಞಾನಿಕ ದೃಂದ ಆರೋಗ್ಯಕ್ಕೆ ಮತ್ತು ಸತ್ಯತಗೆ ಪೂರಕವಾಗಿದೆ. ಏಕೆಂದರೆ ಅಂದಿನ ಕಾಲದಲ್ಲಿ ವಿದ್ಯಾತ್‌ದೀಪದ ವ್ಯವಸ್ಥೆ ಇರದೇ ಇರುವದು ಕತ್ತಲೆಯನ್ನು ಹೋಗಲಾಡಿಸುವ ಸಲುವಾಗಿ ಈ.ದೀಪದ ಪಂಜನ್ನು ಹಿಡಿಯುತ್ತಿದ್ದರೆಂದು ನಂಬಬಹುದಾಗಿತ್ತು. ಆ ಪದ್ಧತಿಯನ್ನು ಈಗಲೂ ಮಡಿವಾಳ ಜನಾಂಗದವರು ಮಾಡುತ್ತಾರೆ. ಪಲ್ಲಕ್ಕಿ ಉತ್ಸವ ಮೆರವಣಿಗೆ ಬರುವಂತಹ ಸಂದರ್ಭದಲ್ಲಿ ತುಂಬಿದ ಕೊಡವನ್ನು ಹೊತ್ತುಕೊಂಡು ಅದರಲ್ಲಿರುವ ನೀರು ಖಾಲಿಯಾಗುವವರೆಗೂ ಹಾಕುತ್ತರೆ ಏಕೆಂದರೆ ದೇವರು ಬರುವುದರಿಂದ ಆ ಜಾಗವು ಮಡಿಲಿಂದಿರಲೆಂದು ಹಾಗೂ ದೂಳ ಆಗಿ ಜನರ ಆರೋಗ್ಯ ಕೆಡಬಾರದೆಂದು ಈ ರೀತಿ ನೀರನ್ನು ಹಾಕುತ್ತಾರೆ.

ಪಲ್ಲಕ್ಕಿ ಉತ್ಸವ ವಾದ್ಯಗಳ ಮೂಲಕ ಜಾನಪದ ಕಲೆಗಳ ಮೂಲಕ ವಿಜೃಂಭಣೆಯಿಂದ ಜರುಗುತ್ತದೆ. ಅಂತಹ ಸಂದರ್ಭದಲ್ಲಿ ಪಲ್ಲಕ್ಕಿಗೆ ಎಲ್ಲರು ಹಣ್ಣು-ಕಾ, ಕರ್ಪೂರ-ಊದಬತ್ತಿ ಈ ತರಹದ ಪೂಜಾ ಸಾಮಗ್ರಿಗಳನ್ನು ತಂದು ಪೂಜೆ ಮಾಡುತ್ತಾರೆ. ಈ ಎಲ್ಲಾ ಸಾಮಗ್ರಿಗಳು ದೇವಸ್ಥಾನದ ಹತ್ತಿರವೇ ಸಿಗುತ್ತಿರುತ್ತವೆ. ದೇವರಿಗೆ ಯಾವಾಗದರೂ ಹಣ್ಣು-ಕಾ ಕೊಡಬಹುದು ಆದರೆ ಪಲ್ಲಕ್ಕಿ ಉತ್ಸವಕ್ಕೆ ವರ್ಷದಲ್ಲಿ ಒಂದೆ ಸಾರಿ ಮಾತ್ರ ಹಣ್ಣು-ಕಾ ಕೊಡುವುದೆಂದು ತಿಳಿದು ಎಲ್ಲರು ಪಲ್ಲಕ್ಕಿಗೆ ಪೂಜೆಯನ್ನು ಸಲ್ಲಿಸುತ್ತಾರೆ.

ಈ ರೀತಿಯಾಗಿ ಪಲ್ಲಕ್ಕಿ ಉತ್ಸವ ವಾದ್ಯಗಳ ಮೆರವಣಿಗೆಯ ಮೂಲಕ ಪಾದಗಟ್ಟೆ ಗುಡಿಗೆ ಬಂದು ಪೂಜೆಯನ್ನು ಮಾಡಿಕೊಂಡು ಪುನಃತನ್ನ ಮೊದಲ ಸ್ಥಾನವಾದ ಗುಡಿಗೆ ಹಿಂದಿರುಗುತ್ತದೆ. ಸುಮಾರು ೧೨:೦೦ ರಿಂದ ೦೧:೦೦ ಗಂಟೆಯವರೆಗೆ ಈ ಪಲ್ಲಕ್ಕಿ ಉತ್ಸವವು ಜರುಗುತ್ತದೆ. ಒಟ್ಟಾರೆ ಈ ಪಲ್ಲಕ್ಕಿ ಉತ್ಸವವು ಎಲ್ಲಾ ಜಾತಿ, ಜನಾಂಗದವರನ್ನು ಬೇಧ, ಭಾವವಿಲ್ಲದೆ ಜರುಗುತ್ತದೆ.

### ೫. ಓಕಳಿ

ಜಾತ್ರೆಯು ಮುಗಿದ ನಂತರ ಕೊನೆಯ ದಿನದಲ್ಲಿ ಹೋಕಳಿ ಆಡುವುದು ಸಂಪ್ರದಾಯವಾಗಿದೆ. ಇಲ್ಲಿ ಎಲ್ಲಾ ಸಮುದಾಯದವರು ವಿವಿಧ ಕೆಂಪು, ಹಸಿರು, ನೀಲಿ. ಕೇಸರಿ, ಕಪ್ಪು ಇನ್ನು ಮುಂತಾದ ಬಣ್ಣಗಳನ್ನು ತೆಗದುಕೊಂಡು ನೀರಿನಲ್ಲಿ ಕಲಸಿಕೊಂಡು ಒಬ್ಬರಿಗೊಬ್ಬರು ಮೈಗೆ ಹಾಕಿಕೊಳ್ಳುವುದು, ಮುಖಕ್ಕೆ ಬಣ್ಣ ಹಚ್ಚಿಕೊಳ್ಳುವುದು ಸಂತೋಷದಿಂದ ಈ ರೀತಿಯಾಗಿ ಬಣ್ಣದ ಹೋಕಳಿಯ ಆಟವನ್ನು ಆಡುತ್ತಾರೆ. ಇದು ಜಾತ್ರೆಯು ಮುಗಿದ ಕೊನೆಯ ದಿನದಲ್ಲಿ ನಡೆಯುತ್ತದೆ. ಇದು ಗಂಡಸರು-ಹೆಂಗಸರು, ಚಿಕ್ಕವರು-ದೊಡ್ಡವರು ಮೇಲ್ಜಾತಿ-ಕೆಳಜಾತಿಗಳೆನ್ನದೆ ಬಣ್ಣದ ಆಟವನ್ನು ಆಡುತ್ತಾರೆ. ಹಾಗೂ ಜಾತ್ರೆಗೆಂದು ಬಂದಂತಹ ನೆಂಟರು ಸಹ ಈ ಆಟದಲ್ಲಿ ಭಾಗಿಗಳಾಗಬೇಕಾಗುತ್ತದೆ. ಎಲ್ಲರೂ ತಮ್ಮನ್ನು ಮೈಮರೆತು ಈ ರಂಗುಗಳಿಂದ ಮನೋರಂಜನೆಯನ್ನು ಪಡೆದುಕೊಳ್ಳುತ್ತಾರೆ. ಕೇವಲ ಇದ್ದ ಊರಿನವರಿಗೆ ಮಾತ್ರ ಬಣ್ಣ ಹಾಕದೆ ಬೇರೆ, ಬೇರೆ ಊರಿನವರಿಗೂ ಕೂಡ ಬಣ್ಣವನ್ನು ಹಾಕುತ್ತಾರೆ.

### ೬. ಜಾನಪದ ಕಲೆಗಳು

ಜಾತ್ರೆಯಲ್ಲಿ ಈ ರೀತಿಯ ಜನಪದ ಕಲೆಗಳನ್ನು ನಾವು ಕಾಣಬಹುದಾಗಿದೆ. ತಮಟೆ, ನಂದಿಕೋಲು, ಡೋಲು, ಭೈರವನ ಕುಣಿತ, ನಾಟಕ ಇತ್ಯಾದಿಗಳನ್ನು ಈ ಜಾತ್ರೆಯಲ್ಲಿ ಕಾಣಬಹುದಾಗಿದೆ. ಜಾತ್ರೆಯಲ್ಲಿ ಮುಖ್ಯವಾಗಿ ತಮಟೆ ಹೊಡೆಯುವುದು ಬಹಳ ಮುಖ್ಯವಾದಂತಹ ಕಲೆಯಾಗಿದೆ. ಉತ್ಸವದ ಸಂದರ್ಭದಲ್ಲಿ ಐದರಿಂದ ಆರು ತಮಟೆಗಳನ್ನು ಮತ್ತು ಬ್ಯಾಂಡಗಳನ್ನು ಬಾರಿಸುತ್ತಾರೆ. ಇದರ ವಾದ್ಯಗಳಿಗೆ ಅನುಗುಣವಾಗಿ ನಂದಿಕೋಲನ್ನು ಕುಣಿಸುವುದು, ತಮಟೆ ಬಾರಿಸುತ್ತಾ, ನೆಲದ ಮೇಲೆ ರೂಪಾಯಿ ಬಿಲ್ಲೆಯನ್ನು ಕೈಯಿಂದ ಮುಟ್ಟದೇ ಹಣೆಗೆ ಹಚ್ಚಿಕೊಳ್ಳುವುದು ಇದನ್ನು ನೋಡಲು ಬಹಳ ಆಶ್ಚರ್ಯಕರ ಸಂಗತಿ. ಏಕೆಂದರೆ ಸಾಧ್ಯವಾಗದಂತಹ ಆಟವಾಗಿದೆ. ನಂದಿಕೋಲು ಕುಣಿಸುವುದು ಸಹ ಅಷ್ಟೆ. ಇಲ್ಲಿ ಒಬ್ಬರಿಗಿಂತ ಒಬ್ಬರು ಚೆನ್ನಾಗಿ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಿಕೊಳ್ಳಲು ಪೈಪೋಟಿಗೆ ಮುಗಿಬೀಳುತ್ತಾರೆ. ಒಬ್ಬರಿಗಿಂತ ಒಬ್ಬರು ಚೆನ್ನಾಗಿನಂದಿಕೋಲನ್ನು ಕುಣಿಸುವುದು, ಗೊಂಬೆಗಳ ಮುಖವಾಡವನ್ನು ದರಿಸಿಕೊಂಡು ಜನರನ್ನು ನಕ್ಕು ನಲಿಸುವಂತೆ ಅವರ ಪ್ರಧರ್ಶನ ಕೂಡ ಎದ್ದು ಕಾಣುತ್ತಿರುತ್ತದೆ. ಹಾಸ್ಯವಾದಂತಹ ಪ್ರಾಣಿ, ಮನುಷ್ಯರಂತಹ ಭಾವಚಿತ್ರದ ಮುಖವಾಡವನ್ನು ಹಾಕಿಕೊಂಡು ಜನರನ್ನು ನಕ್ಕುನಲಿಸುತ್ತಾರೆ. ವೀರಭದ್ರನ ಕುಣಿತ ಸಹ ಸಾಗುತ್ತದೆ. ಇಲ್ಲಿ ವೀರಭದ್ರನ ಕುಣಿತದೊಂದಿಗೆ ಒಡಪುಗಳನ್ನು ಹೇಳುತ್ತಾ ಸಮಾಳದ ನಾದಕ್ಕೆ ತಕ್ಕಂತೆ ಕುಣಿಯುವುದು ಈ ಜಾತ್ರೆಯಲ್ಲಿ ಕಂಡು ಬರುತ್ತದೆ. ಉತ್ಸವ ಜರುಗುವಂತಹ ಸಂದರ್ಭದಲ್ಲಿ ಸಾವಿರಾರು ಜನರು ವೀಕ್ಷಕರಿರುತ್ತಾರೆ. ಅದರಲ್ಲಿ ಹೆಂಗಸರು ಸೋಬಾನಪದ, ಹಾಗೂ ಮರಿಸ್ವಾಮಿ ದೇವರ

ಪದದ ಹಾಡುಗಳನ್ನು ಹಾಡುತ್ತ ಪಲ್ಲಕ್ಕಿ ಉತಸ್ವ ಸಾಗುತ್ತಿರುತ್ತದೆ. ಜಾತ್ರೆಯ ದಿನದಂದು ನಾಟಕ ಪ್ರಧರ್ಶನ ಮಾಡುತ್ತಾರೆ. ಅದು ಸಾಮಾಜಿಕ, ಧಾರ್ಮಿಕ, ಅಥವಾ ಸಾಹಿತ್ಯೀಕ ನಾಟಕವಾಗಿ ವರ್ಷಕ್ಕೆ ಬೇರೆ ಬೇರೆ ನಾಟಕಗಳನ್ನು ಆಡುತ್ತಾರೆ. ಈ ನಾಟಕದ ತಾಲೀಮು ಸುಮಾರು ಎರಡು ತಿಂಗಳಕಾಲ ನಡೆದಿರುತ್ತದೆ. ಹೀಗೆ ಪೂರ್ಣ ಸಿದ್ದರಾಗಿ ಜಾತ್ರೆಯ ಸಂದರ್ಭದಲ್ಲಿ ಪ್ರದರ್ಶಿಸುತ್ತಾರೆ. ಸ್ತ್ರೀ–ಪಾತ್ರಗಳು ಬಂದರೆ ಸ್ತ್ರೀಪಾತ್ರಗಳನ್ನು ಪುರುಷರೇ ಅಧ್ಭುತವಾಗಿ ಸೀರೆಯುಟ್ಟುಕೊಂಡು, ವಡವೆಗಳನ್ನು ಧರಿಸಿಕೊಂಡು ಶುದ್ಧ ಸ್ತ್ರೀಯಂತೆ ನಟನೆ ಮಾಡುತ್ತಾ ಗಂಡಸು ಎಂದು ಯಾರಿಗೂ ಗೊತ್ತಾಗದ ರೀತಿಯಲ್ಲಿ ಪ್ರದರ್ಶಿಸುತ್ತಾರೆ. ಆದ್ದರಿಂದ ಈ ನಾಟಕಗಳಲ್ಲಿ ಸ್ತ್ರೀಯರನ್ನು ಬಳಸಿಕೊಳ್ಳುವುದಿಲ್ಲ. ಅವರು ಆಡುವಂತಹ ನಾಟಕಗಳು ಸ್ಟೇಷನ್ ಮಾಸ್ತರ್, ಅಭಿಮಾನ್ಯುಕಾಳಗ, ಕರ್ಣಾರ್ಜುನ ಕಾಳಗ, ಎಲ್ಲಮ್ಮನ ನಾಟಕ, ಕೌಡ್ಲಿಕನ ಕಥೆ ಇತ್ಯಾದಿ ನಾಟಕಗಳನ್ನು ಪ್ರದರ್ಶಿಸುತ್ತಾರೆ.

ಈ ನಾಟಕ ಇಡೀ ರಾತ್ರಿ ಪ್ರದರ್ಶನಗೊಳ್ಳುತ್ತದೆ. ಇಲ್ಲಿ ಬರುವಂತಹ ಪಾತ್ರಗಳು ಸಹ ನಿಜಜೀವನದಲ್ಲಿ ನಡೆದಿರುವಂತಹ ಘಟನೆಗಳನ್ನು ಅಳವಡಿಸಿಕೊಂಡು ಆವಭಾವದಿಂದ ಪ್ರದರ್ಶನ ಮಾಡುತ್ತಾರೆ. ಅದೇ ರೀತಿ ನಾಟಕದಲ್ಲಿ ಅಡ್ಡಸಾರಥಿಯ ಪಾತ್ರವು ಇರುತ್ತದೆ. ಜನರಿಗೆ ಬೇಸರ ತರುವಂತಹ ಸಂದರ್ಭಗಳು ಬಂದಾಗ ಜನರಿಗೆ ಬೇಸರವಾಗದ ರೀತಿಯಲ್ಲಿ ಹಾಸ್ಯಮಯ ಪ್ರದರ್ಶನವನ್ನು ಸಾರಥಿಯು ಪ್ರದರ್ಶಿಸುತ್ತಾನೆ. ಈ ಊರಿನಲ್ಲಿ ನಾಟಕವನ್ನು ಆಡುವಂತವರೆಂದರೆ ಹೆಚ್ಚಿನದಾಗಿ ಕಾಡುಗೊಲ್ಲರೆ, ಹೊರತು ಬೇರೆ ಜನಾಂಗದವರು ಆಡುವುದು ಬಹಳ ಕಡಿಮೆ. ಏಕೆಂದರೆ ಈ ಊರಿನಲ್ಲಿ ಹೆಚ್ಚಾಗಿ ಕಾಡುಗೊಲ್ಲರೆ ಇರುವುದರಿಂದ ನಾಟಕಗಳನ್ನು ಅವರೇ ಆಡುತ್ತಾರೆ.

ನಾಟಕವನ್ನು ನೋಡಲು ಬೇರೆ ಊರಿನಿಂದ ವೀಕ್ಷಕರು ಬರುತ್ತಾರೆ. ಪಾತ್ರಗಳಿಗನುಗುಣವಾಗಿ ಬಣ್ಣ ಬಣ್ಣದ ವೇಷ–ಭೂಷಣಗಳನ್ನು ಧರಿಸಿಕೊಂಡು ಜನರು ಆರ್ಕಸುವಂತೆ ಮಾಡುತ್ತವೆ. ಪಾತ್ರಗಳು ಕಾಲ್ಪನಿಕವಾಗಿದ್ದು, ಸಮಂಜಸವಾಗಿರುತ್ತವೆ. ಪ್ರದರ್ಶನ ಬೆಳಗಿನವರೆಗೆ ಸತತವಾಗಿ ನಡೆದಿರುತ್ತದೆ. ಈ ಸಂದರ್ಭದಲ್ಲಿ ಪಾತ್ರ ಮಾಡಿದಂತಹ ವ್ಯಕ್ತಿಗಳಿಗೆ ಮ್ಯು ರೂಪದಲ್ಲಿ ಹಣವನ್ನು ನೀಡುತ್ತಾರೆ. ಹೀಗೆ ಪ್ರತಿವರ್ಷ ಜಾತ್ರೆಯ ಸಂದರ್ಭದಲ್ಲಿ ನಾಟಕ ಪ್ರದರ್ಶನವನ್ನು ಮಾಡುತ್ತಾರೆ.

## ಉಪಸಂಹಾರ

ಜಾನಪದ ಅಧ್ಯಯನವು ಮೊದಲು ಸಂಗ್ರಹ ರೂಪದಲ್ಲಿ ಮಾತ್ರ ತನ್ನ ವ್ಯಾಪ್ತಿಯನ್ನು ಹೊಂದಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ವೈಜ್ಞಾನಿಕವಾಗಿ ಶಾಸ್ತ್ರೀಯಬದ್ಧವಾಗಿ ಗ್ರಾಮ, ಜಾತ್ರೆ, ಆಚರಣೆ, ಜನಾಂಗ, ಹಬ್ಬ ಮತ್ತು ಸಂಪ್ರದಾಯಗಳ ಅಧ್ಯಯನಗಳು ನಡೆಯುತ್ತವೆ. ಕೇವಲ ಕಥೆ, ಗಾದೆ, ಒಗಟು, ಹಾಗೂ ಸಂಗೀತಗಳ ಮೂಲಕ ಸಂಸ್ಕೃತಿಯನ್ನು ಕಟ್ಟಿಕೊಡುವ ಪ್ರಯತ್ನಗಳನ್ನು ಮಾಡುತ್ತಿದ್ದರು. ಆದರೆ ಇತ್ತೀಚೀನ ದಿನಗಳಲ್ಲಿ ಜಾನಪದದ ಪ್ರತಿಯೊಂದು ಅಂಶಗಳನ್ನಿಟ್ಟುಕೊಂಡು ಅಧ್ಯಯನ ಮಾಡುತ್ತಿದ್ದಾರೆ.

ಜಾನಪದ ನಮ್ಮ ಜನಪದರಿಂದ ಬಂದ ಒಂದು ಅಮೂಲ್ಯ ಗಣಿಯಾಗಿದೆ. ಅಸಂಖ್ಯಾತ ರೀತಿ, ನೀತಿ, ನಂಬಿಕೆ, ಸಂಪ್ರದಾಯಗಳು ಜನಪದರ ಕೊಡುಗೆಗಳು. ಮಾನವನ ಜೀವನವನ್ನು ಈ ಜಾನಪದ ರೂಪಿಸುವುದಲ್ಲದೆ ಆತನ ಬದುಕಿನ ಹೊಸ ಆಯಾಮಗಳನ್ನು ಈ ಜಾನಪದ ಕಟ್ಟಿಕೊಡುತ್ತದೆ. ಒಂದು ಶಿಷ್ಟಸಮಾಜವನ್ನು ಈ 'ಜಾನಪದ ಸಂಸ್ಕೃತಿ' ಯ ಪಾತ್ರ ಮಹತ್ವವಾದುದು. ಅದರಂತೆ ಈ ಜನಪದ ಸಂಸ್ಕೃತಿ ಶಿಷ್ಟ ಸಂಸ್ಕೃತಿಯ ಬೆನ್ನೆಲುಬಾಗಿ ಸಹಕರಿಸುತ್ತಾ ಮುಂದೆ ಸಾಗುತ್ತದೆ. ಜಾನಪದ ಎಂದೂ ಬತ್ತದ ಜೀವನದಿ ಅನುಭವಗಳ ಸಾಗರ. ಅದರಲ್ಲರುವುದೆಲ್ಲವೂ ಜೀವಮುಖಿ. ಜೀವರಕ್ಷಕವಾದವುಗಳು. ಅಲ್ಲೆಲ್ಲವಕ್ಕೂ ಪರಿಹಾರವಿದೆ. ಆದರೆ ಜನಪದರ ದೇವತೆಗಳಲ್ಲಿ ಅನೇಕ ದೇವರುಗಳು ಬರುತ್ತವೆ. ಅದರಲ್ಲಿ ವಿಶೇಷವಾಗಿ ಮರಿಸ್ವಾಮಿ ದೇವರನ್ನು ಭೈರಾಪುರದ ಗ್ರಾಮದೇವರನ್ನಾಗಿ ಆಚರಿಸುತ್ತಾರೆ. ವಿಶೇಷವಾಗಿ ಮರಿಸ್ವಾಮಿ ದೇವರನ್ನು ಭೈರಾಪುರದ ಗ್ರಾಮ ದೇವರನ್ನಾಗಿ ಆರಾಧಿಸುತ್ತಾರೆ. ಈ ದೇವರನ್ನು ಪ್ರತಿವರ್ಷ ಪೆಬ್ರವರಿ ತಿಂಗಳಲ್ಲಿ ಜಾತ್ರೆಯಾಗಿ ಆಚರಿಸುತ್ತಾರೆ. ದೇವರ ಪೂಜೆ ಎನ್ನುವದು ಮೂಲ ಘಟಕಾಂಶವಾಗಿದ್ದು, ಇದನ್ನು ನಾವು ಸದ್ಯದ ಪರಿಶೀಲನೆಯಲ್ಲಿ ಆಚರಣೆ ಎಂದು ಕರೆಯೋಣ. ಈ ಆಚರಣೆ ಹುಟ್ಟಿಕೊಂಡಿರುವಂಥಹ ಸಣಘಟನೆ ಜಾತ್ರೆ ಸ್ಥೂಲವಾಗಿ ಇದನ್ನು ನಾವು ಹೀಗೆ ಮನಗಾಣಬಹುದು. ಜಾತ್ರೆಯ ಉದ್ದೇಶ ಮನೋರಂಜನೆಯೇ ಅಥವಾ ದೇವರ ಪೂಜೆಯ ನೆಪ ಎಂದು ನಾವು ಕಂಡುಕೊಳ್ಳಬಹುದು.

ಜಾತ್ರೆ ಲಾಭದಾಯಕ ಉದ್ದಿಮೆಯಾಗಿ ನಡೆಯುತ್ತದೆ. ಹಾಗಾಗಿ ಇಂದು ನಾವು ಕಾಣುವುದು. ಜಾತ್ರೆಯ ಒಳ ಆಚರಣೆಗಳಿಗಿಂತ ಮುಖ್ಯವಾಗಿ ಹೊರ ಆಡಂಬರವೇ ಪ್ರಮುಖವಾಗಿದೆ. ದೇವರ ಪೂಜೆಗಳು, ಶಾಸ್ತ್ರಗಳು, ಸಂಪ್ರದಾಯಗಳು ಆಚರಿಸಲ್ಪಡುತ್ತಾ ಜಾತ್ರೆಯಲ್ಲಿ ನಡೆಯುವ ವ್ಯಾಪಕವ್ಯವಹಾರ ಮೋಜುಗಳು ಇಂದು ಎಲ್ಲರನ್ನು ಜಾತ್ರೆಯ ಬಗ್ಗೆ ನಿರೀಕ್ಷೆ ಪಡುವಂತೆ ಮಾಡಿವೆ. ಹಳ್ಳಿಯ ಜನಗಳಿಗೆ ಮಾತ್ರ ಜಾತ್ರೆ ವಾಣಿಜ್ಯದ ಉದ್ದೇಶಗಳನ್ನು ಈಡೇರಿಸುತ್ತದೆ. ಎಷ್ಟೋ ದಿನಗಳಿಗೊಮ್ಮೆ ಗೆಳೆಯರು ಬಂದುಗಳು ನೆಂಟರು ಎಲ್ಲಾ ಸೇರಿಕೊಂಡು ಸಂತೋಷವನ್ನು ಹಂಚಿಕೊಳ್ಳಲು ನೆರವಾಗುತ್ತವೆ. ಮರಿಸ್ವಾಮಿದೇವರನ್ನು ಹೆಚ್ಚಿನದಾಗಿ ಕೆಳಸಮುದಾಯದವರೆ ನಂಬದವರಾಗಿದ್ದಾರೆ. ಏಕೆಂದರೆ ಈ ವಾಸ್ತವತೆಯ ಹಿನ್ನೆಲೆಯಿಂದ ಗಮನಿಸಿದಾಗ ದೇವರ ಬಗ್ಗೆ ಕಾಳಜಿ, ಮನೋಭಾವ, ನಂಬಿಕೆಯಂತಹ ಅಂಶಗಳನ್ನು ಕೆಳ ಸಮುದಾಯದವರ ಮೇಲೆ ಪರಿಣಾಮವನ್ನು ಬೀರುತ್ತವೆ. ಕಾರಣ ಅವರನ್ನು ಹಿಂಸಿಸುತ್ತಿರುವಂತಹ

ಬಡತನವುಕೂಡ ಒಂದಾಗಿದೆ. ಮೇಲ್ಜಾತಿಯ ಸಮುದಾಯದವರು ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕವಾಗಿ ಆಕ್ರಮಣಕಾರಿಯಾಗಿ ಕೆಳಸಮುದಾಯದವರನ್ನು ಪ್ರಭುತ್ವದ ಹಿನ್ನೆಲೆಯಲ್ಲಿ ಅವರ ಸಂಪತ್ತನ್ನು ಕಬಳಿಸಿಕೊಂಡು ತುಳಿತಕ್ಕೆ ಕೆಳಸಮುದಾಯದವರನ್ನು ಮಾಡಿಬಿಟ್ಟವೆ. ಈ ದೃಷ್ಟಿಯಿಂದ ದಲಿತರು ಬೇರೆ ಮಾರ್ಗವಿಲ್ಲದೆ ದೇವರ ಮೊರೆ ಹೋಗುದನ್ನು ನೋಡಬಹುದು.

ಗ್ರಾಮೀಣ ಪ್ರದೇಶದಲ್ಲಿ ದೇವರ ಬಗ್ಗೆ ಹೆಚ್ಚಿನದಾಗಿ ಮೌಖಿಕವಾಗಿ ಜನಪದ ಕಲೆಗಳನ್ನು ಮೈಗೂಡಿಸಿಕೊಂಡವರೆಂದರೆ ಈ ನಮ್ಮ ಕೆಳಸಮುದಾಯದವರು. ಹಾಗಾಗಿ ಮರಿಸ್ವಾಮಿದೇವರ ಜಾತ್ರೆ ಮಹೊತ್ಸವ, ಆಚರಣೆ, ನಂಬಿಕೆ, ಸಂಪ್ರದಾಯ ಇತರೆ ಪ್ರಭುತ್ವ ಸಮುದಾಯದವರಿಗಿಂತ ವಿಭಿನ್ನ ರೀತಿಯಲ್ಲಿ ಕಾಣಬಹುದಾಗಿದೆ. ಭೈರಾಪುರದ ಪ್ರದೇಶದಲ್ಲಿ ಮರಿಸ್ವಾಮಿ ಜಾತ್ರೆಯ ಸಂದರ್ಭದಲ್ಲಿ ಆರ್ಥಿಕವಾಗಿ ಅತಿ ಹೆಚ್ಚು ಹಣ ವ್ಯಯ ಮಾಡುವುದೆಂದರೆ ಈ ನಮ್ಮ ದಲಿತರು.ಇಷ್ಟು ನಿಖರವಾಗಿ ಹೇಳಲು ನಾನು ಅದೇ ಕ್ಷೇತ್ರದವನಾಗಿರುವುದರಿಂದ ಮತ್ತು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡಂತಹ ಪರಿಸ್ಥಿತಿ ಮತ್ತು ಮಾಹಿತಿಯು ಸಹ ಅದಾಗಿದೆ.

ಮರಿಸ್ವಾಮಿ ಒಬ್ಬ ವೀರಶೈವ ಸಮುದಾಯದ ಸಾಂಸ್ಕೃತಿಕ ನಾಯಕನೆಂದು ನಿಖರವಾಗಿ ಪರಿಗಣಿಸಬಹುದು. ಇದಕ್ಕೆ ಆಧಾರವಾಗಿ ವೈ.ನಾಗೇಶಶಾಸ್ತ್ರಿಗಳು ಭಾಮಿನಿಷಟ್ಪದಿಯಲ್ಲಿ ಕೂಡಿದ ಪುರಾಣವೇ ಆಕರವಾಗಿದೆ. ಈ ಹಿನ್ನೆಲೆಯಲ್ಲಿ ಮರಿಸ್ವಾಮಿ ದೇವರ ಚಾರಿತ್ರ್ಯ ಮತ್ತು ಕಾಯಕಪವಾಡಗಳನ್ನು ಈ ಪುರಾಣವು ಮೈದುಂಬಿಕೊಂಡಿದೆ. ಹಾಗಾಗಿ ಈ ಮರಿಸ್ವಾಮಿಯನ್ನು ಒಬ್ಬ ಸಾಂಸ್ಕೃತಿಕನಾಯಕನೆಂದು ಪರಿಗಣಿಸಬಹುದಾಗಿದೆ. ಈ ರೀತಿಯ ಒಬ್ಬ ನಾಯಕನನ್ನು ಜನಪದರು ದೇವರೆಂದು ಪೂಜಿಸತೊಡಗಿದ್ದಾರೆ. ಮರಿಸ್ವಾಮಿದೇವರ ಜಾತ್ರೆಯ ಸಂದರ್ಭ್ದದಲ್ಲಿ ಕೆಳಸಮುದಾಯದವರು ಮೇಲ್ವರ್ಗದವರೊಂದಿಗೆ ನೇರವಾಗಿ ಎದುರಿಸಿದ ಸಶಕ್ತರಾಗಿದ್ದರೂ ಪರೋಕ್ಷವಾಗಿ ತಮ್ಮ ಜಾನಪದ ಕಲೆಗಳ ಮೂಲಕ ತಮ್ಮ ತೊಳಲನ್ನು ವ್ಯಕ್ಯಪಡಿಸುತ್ತಾರೆ. ಭಜನೆ ಹಾಡುಗಳ ಮೂಲಕ ಹೆಣ್ಣುಮಕ್ಕಳ ಹಾಡುಗಳ ಮೂಲಕ ಇತ್ಯಾದಿ ಕಲೆಗಳ ಮುಖಾಂತರ ಅವರನ್ನು ಮೇಲ್ನೋಟಕ್ಕೆ ಹೊಗಳುವ ರೀತಿಯಲ್ಲಿ ಕಂಡರೂ ಸಹ ಅವು ಪರೋಕ್ಷವಾಗಿ ತೆಗಳಿದಂತಿರುತ್ತವೆ. ಆದರೂ ಸಹ ಮರಿಸ್ವಾಮಿ ದೇವರ ಬಗ್ಗೆ ಅಪಾರವಾದಂತಹ ನಂಬಿಕೆಯನ್ನು ಹೊಂದಿದವರಾಗಿದ್ದಾರೆ. ಆನರ ಬದುಕು ನಿಧಾನವಾಗಿ ದುರ್ಬಲವಾಗುತ್ತದೆ. ಅದರಲ್ಲೂ ರೈತನ ಬದುಕುಮತ್ತಷ್ಟು ಸೂಚನೀಯವಾಗುತ್ತದೆ. ಹೀಗಾಗಿ ಮರಿಸ್ವಾಮಿ ಜಾತ್ರೆ ಎಷ್ಟೇ ಹೆಚ್ಚು ಜನ ಸೇರಿದಂತೆ ಕಂಡರೂ ಕೂಡ ಮೊದಲಿನ ಸಮ್ನುದ್ಧತೆ ಆಗಿಯು ಕಾಣುತ್ತದೆ. ಅದರೊಂದಿಗೆ ಜಾತ್ರೆ ಎನ್ನುವುದು ತಾವು ಗಳಿಸಿದ ಹಣವನ್ನು ಒಂದು ದಿನ ಬಂದು ಬಾಂದವರೊಂದಿಗೆ ಸಂತೋಷವಾಗಿ ಹಂಚಿಕೊಳ್ಳುವ ಕಾಲ ಹೋಗಿ ಅನಗತ್ಯವಾಗಿ ಸಾಲಗಳ ಹೊರೆ ಹೊರುವಂತಾಗುತ್ತದೆ. ಆನಪದ ಕಲೆಗಳಿಗೆ ಸ್ಥಳೀಯ ಪ್ರತಿಭೆಗಳಿಗೆ ಅವಕಾಶವನ್ನೊದಗಿಸುವ ಸಂದರ್ಭವಾಗುವುದರ ಬದಲು ಊರಲ್ಲಿ ಇರಬಹುದಾದ ವೈಮನಸ್ಸುಗಳನ್ನು ಪ್ರಕಟಪಡಿಸಲು ಅಥವಾ ಪ್ರತಿಷ್ಠೆ ವರ್ಗದವರು ಮತ್ತು ಬಲಿಷ್ಟರು ತಮ್ಮ ಪ್ರತಿಷ್ಟೆಗಳನ್ನು ಮೆರೆಸುವ ಕಾರಣವನ್ನಾಗಿಸಿಕೊಂಡಿದ್ದಾರೆ. ವ್ಯಾಪಾರಗಳು ಮತ್ತು ಬಂಡವಾಳಗಾರರ ಮೌಲ್ಯಗಳೇ ರಕ್ಷಿಸುವಂತಾಗುವಂತೆ

ಸಾಂಸ್ಕೃತಿಕ ರಂಗದಲ್ಲಿ ಅವರ ದೇವರುಗಳೇ ಅವರ ಕಲೆಗಳೇ ಅವರ ಮೋಜಿನ ರೀತಿಗಳೇ ಹೆಚ್ಚು ಪ್ರವರ್ಧಮಾಬಕ್ಕೆ ಬರುತ್ತವೆ. ಮತತು ಜನರನ್ನು ಆಕರ್ಷಿಸುತ್ತವೆ.

ಭೈರಾಪುರವು ಹಿಂದುಳಿದ ಗ್ರಾಮ. ಮರಿಸ್ವಾಮಿ ಅದೇ ಗ್ರಾಮಕ್ಕೆ ಸೀಮಿತವಾಗಿರದೇ ಆಜಬಾಜು ಗ್ರಾಮದ ದೇವರು. ಆ ಗ್ರಾಮಗಳಿಗೆ ಒದಗುವ ದುಸ್ಥಿತಿಯೆ ಆ ದೇವರಿಗೂ ಒದಗುತ್ತದೆ. ಹೆಚ್ಚಿನದಾಗಿ ಭೈರಾಪುರ ಗ್ರಾಮದ ದುಸ್ಥಿತಿಯಾದರೆ ಮರಿಸ್ವಾಮಿ ದೇವರಿಗೂ ಈ ಪರಿಸ್ಥಿತಿ ಬಂದೊದಗುತ್ತದೆ. ಎಂತಲೂ ನಂಬಬಹುದು. ಇಲ್ಲಿ ನಾವು ಗುರುತಿಸುವ ದುರಂತವೆಂದರೆ ಗ್ರಾಮೀಣ ಜನ ತಮ್ಮ ಪುರಾತನ ಸಂಪ್ರದಾಯಗಳಿಂದ ದೂರವಾಗುತ್ತಿದ್ದರೆಂದರೆ ವೈಜ್ಞಾನಿಕತೆಯತ್ತ ಮುನ್ನಡೆಯುತ್ತಿದ್ದಾರೆಂದಲ್ಲ. ಬದಲಿಗೆ ಸಾಂಸ್ಕೃತಿಕ ಏಕಸ್ವಾಮ್ಯಕ್ಕೆ ಅಂದರೆ ಸ್ವಂತಿಕೆಯನ್ನು ಕಳೆದುಕೊಂಡು ಕೇವಲ ಅನುಕರಣೆಗೆ ತುತ್ತಾಗುತ್ತಿದ್ದಾರೆ. ಈ ಸಾಂಸ್ಕೃತಿಕ ಪತನ ನೋವಿನ ಸಂಗತಿ. ನಮ್ಮ ಹಿರಿಯರು ತಮ್ಮ ಮಿತಿಯೊಳಗೆ ತಮ್ಮ ಬದುಕಿಗೆ ಸಂಬಂದಿಸಿದಂತೆ ಬದುಕನ್ನು ಅವರು ಪರಿಬಾಮಿಸಿದಂತೆ ರೂಢಿ ಆಚರಣೆಗಳನ್ನು ರೂಢಿಸಿಕೊಂಡಿದ್ದಾರೆ. ಇಂಥಹವು ಪಲ್ಲಟಗೊಳ್ಳುತ್ತವೆ. ಇದರ ಅರ್ಥ ನಾವು ಹಳೆಯ ಕಂದಾಚಾರಗಳನ್ನು ಅಥವಾ ಉಳಿಗಮಾನ್ಯ ಸಂಸ್ಕೃತಿಯನ್ನು ವೈಭವಿಕರಿಸಬೇಕೆಂದಲ್ಲ. ಹಾಗೆಯೆ ಸಂಸ್ಕೃತಿಯ ಕೇಂದ್ರಿಕರಣಕ್ಕೆ ಸಂಪೂರ್ಣ ವ್ಯತಿರೇಖವನ್ನು ವ್ಯಕ್ತಪಡಿಸಬೇಕೆಂದು ಅಲ್ಲ. ಆದರೆ ಹಳೆಯ ಕಂದಾಚಾರದಿಂದ ಹೊಸ ಮೂಢಾಚಾರಕ್ಕೆ ಅವರು ಬಲಿಯಾಗುವುದರ ಬದಲಿಗೆ ತಮ್ಮ ಜಾನಪದ ಆಚರಣೆಗಳ ಸೊಗಡನ್ನು ಕೈ ಬಿಡುವಾಗ ಅದು ಮತ್ತಷ್ಟು ವೈಚಾರಿಕತೆಡೆಗೆ ಅಥವಾ ಹೊಸ ಬಗೆಯ ಸಂಬ್ರಮಗಳಿಗೆ ಮುನ್ನೆಡೆಯುತ್ತಿದ್ದರೆ ಚೆಂದ. ಹಾಗಾಗಿ ಈ ಸ್ಥಿತ್ಯಂತರವನ್ನು ಜಾನಪದ ವಿದ್ಯಾರ್ಥಿಗಳಾಗಿ ನಾವು ಸಾಕ್ಷೀಭೂತರಾಗಿ ನಿರೀಕ್ಷಿಸುತ್ತ ಅದರಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಾ ಚಾರಿತ್ರಿಕ ವಿಶ್ಲೇಷಣೆಗೆ ಅನುವು ಮಾಡಿಕೊಡುವ ಹಾಗೂ ಅನುವಾಗುವ ಮನಸ್ಥಿತಿಗೆ ಸಿದ್ದರಾಗಬೇಕಾಗಿದೆ.

ಯಾವುದೇ ಅಧ್ಯಯನದಲ್ಲಿ ತೀವ್ರವಾಗಿ ತೊಡಗಿಸಿಕೊಂಡಾಗ ಹೊಸ ಹೊಸ ಮುಖಗಳು, ದಾರಿಗಳು ಪರಿಚಯವಾಗುತ್ತಾ ಹೋಗುತ್ತವೆ. ಅಂತಹ ಅನುಭವವು ಪ್ರಸ್ತುತ ಅಧ್ಯಯನದಲ್ಲಿ ನಿನಗೂ ಆದದ್ದೆ ಮೌಖಿಕ ಚರಿತ್ರೆಯನ್ನು ಈಗ ಕಾಣಿಸಿಕೊಳ್ಳುವ ಐತಿಹ್ಯಗಳೊಂದಿಗೆ ಹೋಲಿಸಿ ನೋಡಿದರೆ ಕೆಲವು ಸತ್ಯಗಳು ಗೋಚರಿಸುತ್ತವೆ. ಹಾಗೆಯೇ ಸತ್ಯಕ್ಕೆ ದೂರವಾದ ಎಳೆಗಳು ಸಿಗುತ್ತವೆ. ಹೀಗಾಗಿ ಇಲ್ಲಿ ಸೂಕ್ಷ್ಮ ದೃಷ್ಟಿಕೋನದಿಂದ ಸತ್ಯಸತ್ಯತೆಗಳನ್ನು ಪರಾಮರ್ಶಿಸಿ ನೋಡುವ ಪ್ರಯತ್ನ ಮಾಡಿದ್ದೇನೆ. ಅಂತಹ ಕೆಲವು ಹೊಳವುಗಳನ್ನು ಇಲ್ಲಿ ದಾಖಲಿಸಲು ಪ್ರಯತ್ನಿಸಿದ್ದೇನೆ. ಈ ದಾಖಲೆಗೆ ಪ್ರಮುಖವಾದ ಆಕರವೆಂದರೆ ಮೌಖಿಕ ಕಥೆ, ಈತಿಹ್ಯಗೀತೆಗಳು ಮತ್ತು ಪುರಾಣಗಳಾಗಿವೆ. ಹೀಗೆ ಕ್ಷೇತ್ರಕಾರ್ಯವನ್ನೇ ಆಧರಿಸಿ ಕೆಲ ಲಭ್ಯ ಲಿಖಿತಾಧಾರಗಳನ್ನು ಬಳಸಿಕೊಂಡು ಒಂದು ಸಂಶೋಧನಾ ಪ್ಬಂಧವನ್ನು ಕಟ್ಟಲು ಸಾದ್ಯತೆಯನ್ನು ನಾನು ಸಹ ಮಾಡಿದ್ದೇನೆ. ಈ ಪದ್ದತಿಯೇ ಈ ಪ್ರಬಂಧದ ಜೀವಾಳ. ಈ ಮೇಲಿನ ಎಲ್ಲಾ ಅಂಶಗಳು ನನ್ನ ಅಧ್ಯಯನದ ಫಲಿತಗಳು ಇಲ್ಲಿ ಕೆಲ ಮೌಖಿಕ ಆಕರವನ್ನೇ ಬಳಸಿಕೊಂಡು ಗತವನ್ನು ಕಟ್ಟಲು ಪ್ರಯತ್ನಿಸಿದ್ದೇನೆ.

## ವಕ್ತೃಗಳ ವಿವರ

| ಹೆಸರು | ವಯಸ್ಸು | ವೃತ್ತಿ | ಜಾತಿ | ಊರು |
|---|---|---|---|---|
| ಸಣ್ಣಬಾಲಜ್ಜ | ೭೦ | ವೃದ್ಧ | ಕಾಡುಗೊಲ್ಲ | ಭೈರಾಪುರ |
| ಬಸವರಾಜಶಾಸ್ತ್ರಿ | ೫೫ | ಧಾರ್ಮಿಕಆಚರಣೆಗಳು | ಜಂಗಮ | ಭೈರಾಪುರ |
| ಕೃಷ್ಣಪ್ಪ | ೫೦ | ಶಿಕ್ಷಕ | ಕಾಡುಗೊಲ್ಲ | ಭೈರಾಪುರ |
| ಬಜ್ಜಣ್ಣ | ೪೫ | ವ್ಯವಸಾಯ | ಕಾಡುಗೊಲ್ಲ | ಭೈರಾಪುರ |
| ಚಿತ್ತಯ್ಯ | ೫೦ | ವ್ಯವಸಾಯ | ಕಾಡುಗೊಲ್ಲ | ಭೈರಾಪುರ |
| ದುರುಗಣ್ಣ | ೬೫ | ವ್ಯವಸಾಯ | ಮಾದಿಗ | ಭೈರಾಪುರ |
| ಮರಿಸ್ವಾಮಿ | ೨೫ | ಬಿ.ಎ.ವ್ಯಾಸಂಗ | ಮಾದಿಗ | ಭೈರಾಪುರ |
| ಶಿವಣ್ಣ | ೩೦ | ಬಿ.ಎ.ಬಿ.ಇಡಿ. | ಮಾದಿಗ | ಭೈರಾಪುರ |
| ಮರಿಗಿಡ್ಡ | ೪೦ | ವ್ಯವಸಾಯ | ಮಾದಿಗ | ಭೈರಾಪುರ |
| ಜಡೆಪ್ಪ | ೪೫ | ವ್ಯವಸಾಯ | ಕಾಡುಗೊಲ್ಲ | ಭೈರಾಪುರ |
| ರಾಘವೇಂದ್ರ | ೩೫ | ಉಪನ್ಯಾಸಕ | ಕಾಡುಗೊಲ್ಲ | ಓಬಳಾಪುರಂ |
| ಮರಿಗುಂಟೆ.ತಿಪ್ಪೆಸ್ವಾಮಿ | ೪೦ | ಜಿಲ್ಲಾಕಛೇರಿ ಉದ್ಯೋಗಿ | ನಾಯಕರು | ಮೊಳಕಾಲ್ಮೂರು |
| ಮರಿಯಪ್ಪ | ೪೫ | ವ್ಯವಸಾಯ | ಮಾದಿಗ | ಗುಡ್ಡದಹಳ್ಳಿ |
| ಕೆಂಚಪ್ಪ | ೩೮ | ವ್ಯವಸಾಯ | ಮಾದಿಗ | ಗುಡ್ಡದಹಳ್ಳಿ |
| ಮಲಿಯಮ್ಮ | ೬೦ | ವ್ಯವಸಾಯ | ಮಾದಿಗ | ಗುಡ್ಡದಹಳ್ಳಿ |
| ಹನುಮಕ್ಕ | ೫೫ | ವ್ಯವಸಾಯ | ಮಾದಿಗ | ಗುಡ್ಡದಹಳ್ಳಿ |
| ಗೋವಿಂದಪ್ಪ | ೬೦ | ವ್ಯವಸಾಯ | ಊರುಗೊಲ್ಲ | ಗುಡ್ಡದಹಳ್ಳಿ |
| ಜಿ.ಟಿ.ಲಕ್ಷ್ಮಣ | ೬೦ | ವ್ಯವಸಾಯ | ಊರುಗೊಲ್ಲ | ಗುಡ್ಡದಹಳ್ಳಿ |
| ಸಿದ್ದಣ್ಣ | ೫೦ | ರಾಜಕೀಯ ಮುಖಂಡ. | ವೀರಶೈವ | ಭೈರಾಪುರ |
| ಓಂಕಾರಿ | ೪೫ | ವ್ಯವಸಾಯ | ವೀರಶೈವ | ಭೈರಾಪುರ |
| ಮೆಚ್ಚರಿ ಮರಿಯಣ್ಣ | ೬೦ | ಕೂಲಿ | ಹೆಳವರು | ಭೈರಾಪುರ |
| ಪರಮೇಶ್ವರಪ್ಪ | ೫೫ | ವ್ಯವಸಾಯ | ಮಾದಿಗ | ಭೈರಾಪುರ |
| ಚಿತ್ತಯ್ಯ | ೫೦ | ವ್ಯವಸಾಯ | ಕಾಡುಗೊಲ್ಲ | ನಾಗಸಮುದ್ರ |

| | | | | |
|---|---|---|---|---|
| ಈರಣ್ಣ | ೫೫ | ವ್ಯವಸಾಯ | ಊರುಗೊಲ್ಲರು | ನಾಗಸಮುದ್ರ |
| ರಂಗಣ್ಣ | ೬೦ | ವ್ಯವಸಾಯ | ಊರುಗೊಲ್ಲರು | ನಾಗಸಮುದ್ರ |
| ಸಿದ್ದಲಿಂಗಸ್ವಾಮಿ | ೬೦ | ಶಿಕ್ಷಕ | ವೀರಶೈವ | ನಾಗಸಮುದ್ರ |
| ಚಿತ್ತಯ್ಯ | ೩೯ | ವ್ಯವಸಾಯ | ಕಾಡುಗೊಲ್ಲ | ಭೈರಾಪುರ |
| ವೀರನಗೌಡ | ೪೫ | ವ್ಯವಸಾಯ | ವೀರಶೈವ | ಭೈರಾಪುರ |
| ಗೌರಮ್ಮ | ೪೦ | ಮನೆಗೆಲಸ | ವೀರಶೈವ | ಭೈರಾಪುರ |
| ತಿಪ್ಪೇಸ್ವಾಮಿ | ೫೫ | ವ್ಯವಸಾಯ | ವೀರಶೈವ | ಭೈರಾಪುರ |
| ಉಷಾರಾಣಿ | ೨೮ | ಮನೆಗೆಲಸ | ವೀರಶೈವ | ಭೈರಾಪುರ |
| ಅಕ್ಕಮ್ಮ | ೩೮ | ಮನೆಗೆಲಸ | ವೀರಶೈವ | ಭೈರಾಪುರ |
| ಸುಮಂಗಲಮ್ಮ | ೪೦ | ಮನೆಗೆಲಸ | ವೀರಶೈವ | ಭೈರಾಪುರ |
| ಬಸವರಾಜ | ೫೦ | ರಾಜಕೀಯ ಮುಖಂಡ. | ವೀರಶೈವ | ಭೈರಾಪುರ |
| ಬಸವನಗೌಡ | ೫೫ | ವ್ಯವಸಾಯ | ವೀರಶೈವ | ಕಪ್ಪಗಲ್ಲು |
| ರಾಜಶೇಖರ | ೩೦ | ಬಿ.ಎ. | ಮಾದಿಗ | ಭೈರಾಪುರ |
| ತಿಮ್ಮಪ್ಪ | ೫೮ | ಮನೆಗೆಲಸ | ನೇಕಾರರು, | ಭೈರಾಪುರ |
| ಕಾಗೆಮರಿಯಣ್ಣ | ೭೦ | ವಯಸ್ಕ | ಲಿಂಗಾಯತ, | ಭೈರಾಪುರ |
| ಹುಲಿಕುಂಟರಾಯ, | ೬೦ | ವರ್ತಕ | ಶೆಟ್ಟರು, | ಭೈರಾಪುರ |
| ರಾಮಣ್ಣಶೆಟ್ಟಿ | ೮೦ | ವಯಸ್ಕ | ಶೆಟ್ಟರು | ಭೈರಾಪುರ |
| ರಾಜ | ೩೫ | ವ್ಯವಸಾಯ | ಲಿಂಗಾಯತ, | ಭೈರಾಪುರ |
| ನಾರಾಯಣ | ೪೮ | ನ್ಯಾಬೆಲೆ.ಅಂಗಡಿ, | ಶೆಟ್ಟರು | ಭೈರಾಪುರ |
| ಸುರೇಶಸ್ವಾಮಿ | ೪೦ | ಪೋಸ್ಟ್‌ಮ್ಯಾನ್ | ಬ್ರಾಹ್ಮಣ | ಭೈರಾಪುರ |
| ಗೌರಮ್ಮ | ೪೦ | ಮನೆಗೆಲಸ | ಲಿಂಗಾಯತ, | ಭೈರಾಪುರ |
| ಬಾಲಜ್ಜ | ೫೯ | ವ್ಯವಸಾಯ | ಮಾದಿಗ | ಭೈರಾಪುರ |
| ಹೊನ್ನೂರ | ೬೦ | ವ್ಯವಸಾಯ | ಮಾದಿಗ | ಚಿಕ್ಕೇರಹಳ್ಳಿ |
| ಬಸವರಾಜ | ೩೫ | ವ್ಯವಸಾಯ | ಕಾಡುಗೊಲ್ಲ | ಭೈರಾಪುರ |
| ಮೆಂಬರ್‌ಗಂಗಣ್ಣ | ೬೦ | ವ್ಯವಸಾಯ | ಮಾದಿಗ | ಭಟ್ರಹಳ್ಳಿ |
| ಚಂದ್ರಶೇಖರ | ೩೮ | ಬಿ.ಎ. | ಮಾದಿಗ | ಭಟ್ರಹಳ್ಳಿ |

| | | | | |
|---|---|---|---|---|
| ಜಿ.ವೆಂಕಟೇಶ್ | ೪೮ | ಶಿಕ್ಷಕ | ಮಾದಿಗ | ಕಪ್ಪಗಲ್ |
| ಸುಂಕಣ್ಣ | ೩೫ | ವ್ಯವಸಾಯ | ಮಾದಿಗ | ಕಪ್ಪಗಲ್ |
| ಜಿ.ಎಂ. ನಾಗಣ್ಣ | ೬೫ | ವ್ಯವಸಾಯ | ಮಾದಿಗ | ಗುಡ್ಡದಹಳ್ಳಿ |
| ಜಗದೀಶಸ್ವಾಮಿ, | ೭೦ | ಅರ್ಚಕ | ಲಿಂಗಾಯತ | ಭೈರಾಪುರ |
| ನಾಗರತ್ನಮ್ಮ | ೫೦ | ಟೈಲರ್ | ನೆವಾರು | ಭೈರಾಪುರ |
| ಪರಮೇಶ್ವರಪ್ಪ | ೬೫ | ವ್ಯವಸಾಯ | ನೆವಾರು | ಭೈರಾಪುರ |
| ಅಂಜಿನಪ್ಪ | ೪೫ | ನಿರ್ವಾಹಕ | ಮಾದಿಗ | ನಾಗಸಮುದ್ರ |
| ಘಾಪ್ಪೇಸ್ವಾಮಿ | ೫೦ | ವ್ಯವಸಾಯ | ಮಾದಿಗ | ನಾಗಸಮುದ್ರ |
| ದುರುಗಮ್ಮ | ೬೪ | ಗೃಹಿಣಿ | ಮಾದಿಗ | ನಾಗಸಮುದ್ರ |
| ಚಿತ್ತಯ್ಯ | ೭೦ | ವೃದ್ಧ | ಕಾಡುಗೊಲ್ಲ | ನಾಗಸಮುದ್ರ |
| ಜಕಣಾಚಾರಿ | ೬೦ | ಬಡಗಿತನ | ಬಡಿಗೇರ | ಅಮುಕುಂದಿ |
| ನವೀನ್ | ೩೦ | ಬಿ.ಎ. | ಶೆಟ್ಟರು | ಅಮುಕುಂದಿ |

## ಪರಾಮರ್ಶನ ಗ್ರಂಥಗಳು


೧. ಕೃಷ್ಣಮೂರ್ತಿ ಅಗ್ರಹಾರ, ಡಿ.ಆರ್. ನಾಗರಾಜ ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೨

೨. ಗುರುಪ್ರಸಾದ್ .ಸಿ. ಟಿ. ಏಳು ಊರಿನ ದೇವತೆಗಳು ಒಂದು ಅಧ್ಯಯನ, ಪ್ರಸಾರಾಂಗ ಕ.ವಿ.ವಿ.ಹಂಪಿ.೨೦೦೫

೩. ಗುರುಪ್ರಸಾದ್ .ಸಿ. ಟಿ. ಕನ್ನಡ ಜಾನಪದ ಗ್ರಂಥ ಸೂಚಿ, ಪ್ರಸಾರಾಂಗ ಕ.ವಿ.ವಿ.ಹಂಪಿ.೨೦೦೦

೪. ಗೋವಿಂದರಾಜು. ಟಿ. ಚನ್ನದೇವಿ ಅಗ್ರಹಾರ ಜಾನಪದೀಯ ಅಧ್ಯಯನ ಮಸ್ತಕಜೇನು ಚನ್ನದೇವಿ ಅಗ್ರಹಾರ, ದೊಡ್ಡಬಳ್ಳಾಪುರ

೫. ಚಿದಾನಂದ ಮೂರ್ತಿ, ಜನ-ಜನಪದ-ಜಾನಪದ, ಸ್ವಪ್ನ ಬುಕ್‌ಹೌಸ್ ಬೆಂಗಳೂರು, ೨೦೦೨.

೬. ಚಂದ್ರಶೇಖರ ಕಂಬಾರ, ದೇಸೀಯ ಚಿಂತನೆ, ಅಂಕಿತ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೪.

೭. ಚಂದ್ರಶೇಖರ ದಾಮ್ಲೆ, ಜಾತ್ರೆ ಮತ್ತು ಇತರ ಸಂಶೋಧನಾತ್ಮಕ ಪ್ರಬಂಧಗಳು, ಸಮಾಜಶಾಸ್ತ್ರ ಸಂಘ ನೆಹರು ಮೆಮೋರಿಯಲ್ ಕಾಲೇಜ್ ಸೂಳ್ಯ, ೧೯೯೦

೮. ಚಂದ್ರಪ್ಪ, ಎಲ್ಲಮ್ಮ ಒಂದು ಜಾನಪದ ಅಧ್ಯಯನ, ಮುಂಡ ಪ್ರಕಾಶನ, ಬೆಂಗಳೂರು, ೨೦೦೨

೯. ಚಿನ್ನಸ್ವಾಮಿ ಸೋಸಲೆ, ನಮ್ಮ ಗ್ರಾಮಗಳು ಅಂದು ಇಂದು, ಪ್ರಸಾರಾಂಗ ಕ.ವಿ.ವಿ.ಹಂಪಿ.೨೦೦೪

೧೦. ಚಿಕ್ಕಣ್ಣ ಯಣ್ಣೆಕಟ್ಟೆ, ತುಮಕೂರು ಜಿಲ್ಲಾ ಜಾತ್ರೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೧೧. ಚೆಲುವರಾಜು ಜುಂಜಪ್ಪನ ಕಾವ್ಯ ಪ್ರಸಾರಾಂಗ ಕ.ವಿ.ವಿ.ಹಂಪಿ. ೧೯೯೭

೧೨. ಜವರೇಗೌಡ. ದೇ. ಜಾನಪದ ಅಧ್ಯಯನ ಶ್ರೀ ರಾಜೇಂದ್ರ ಪ್ರಿಂಟರ್ಸ್ ಆಂಡ್ ಪಬ್ಲಿಷನ್ಸ್ ಮೈಸೂರು, ೨೦೦೧

೧೩. ಜೋಗನ್ ಶಂಕರ್, ಗ್ರಾಮಸಮಾಜ ಜೀವಪ್ರಕಾಶನ ಮೈಸೂರು, ೧೯೯೫

೧೪. ಮೊಗಳ್ಳಿ ಗಣೇಶ್, ಆದಿಮ, ಸಾರಂಗ ಪ್ರಕಾಶನ ತಿಪಟೂರು, ೨೦೦೫.

೧೫. ಮೊಗಳ್ಳಿ ಗಣೇಶ್ ಮೌಖಿಕ ಕಥನ, ಪ್ರಸಾರಾಂಗ ಕ.ವಿ.ವಿ. ಹಂಪಿ, ೨೦೦೬

೧೬ ಮೊಗಳ್ಳಿ ಗಣೇಶ್, ದೇಸೀ, ಪ್ರಸಾರಾಂಗ ಕ.ವಿ.ವಿ. ಹಂಪಿ, ೧೯೯೭

೧೭. ಮಂಜುನಾಥ ಬೇವಿನಕಟ್ಟಿ, ದೇಸೀ ಚಹರೆ, ಗಾಯಾತ್ರಿ ಎಂಟರ್ ಪ್ರೈಸಸ್, ಮೈಸೂರು, ೨೦೦೪.

೧೮. ಮಂಜುನಾಥ ಬೇವಿನಕಟ್ಟಿ, ಜನಪದ ನಂಬಿಕೆಗಳು, ಪ್ರಸಾರಾಂಗ ಕ.ವಿ.ವಿ. ಹಂಪಿ, ೧೯೯೬

೧೯. ಮಂಜುನಾಥ ಬೇವಿನಕಟ್ಟಿ, ಮೈಲಾರಲಿಂಗನ ಕಾವ್ಯ, ಪ್ರಸಾರಾಂಗ ಕ.ವಿ.ವಿ. ಹಂಪಿ, ೧೯೯೯

೨೦. ದಾಸೇಗೌಡ ಜಿ.ವಿ. ಮಂಡ್ಯಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೦

೨೧. ನಾಗೇಶ್ ಕೆ. ಹೆಬ್ಬಾಲೆ, ಜಾನಪದ ಬನಸಿರಿ, ರುಚಿರಾ ಪ್ರಕಾಶನ ಹೊಸಪೇಟೆ, ೨೦೦೨

೨೨. ನಾಯಕ್.ಡಿ.ಬಿ. ದೇಸೀ ಸಂಸ್ಕೃತಿ. ಬಂಜಾರ ಪ್ರಕಾಶನ, ಗುಲ್ಬರ್ಗಾ, ೨೦೦೨

೨೩. ನಾಗೇಶ್ ಎಚ್.ವಿ. ಗ್ರಾಮವ್ಯಾಸಂಗ, ಚಂದ್ರನಾತ ಪ್ರಕಾಶನ, ಧಾರವಾಡ, ೧೯೮೧

೨೪. ನಾಗೇಶಶಾಸ್ತ್ರಿ ವೈ, ಶ್ರೀ ಮರಿಯೋಗೀಶ್ವರ ಪುರಾಣ, ಕಂಟ್ರೋಲ್ ಆಫೀಸ್ ಗದಗ,

೨೫. ನಾಗೇಶ್ .ಕೆ. ಹೆಬ್ಬಾಲೆ, ಕಾವೇರಿ ಜಾನಪದ, ಪ್ರಸಾರಾಂಗ ಕ.ವಿ.ವಿ. ಹಂಪಿ, ೨೦೦೫
೨೬. ನಾಗರಾಜಯ್ಯ ಹಂಪಾ. ಕರ್ನಾಟಕ ಜಾತ್ರೆಗಳು, ಪ್ರಸಾರಾಂಗ ಕ.ವಿ.ವಿ. ಹಂಪಿ, ೧೯೮೫
೨೭. ಪರಮಶಿವಯ್ಯ ಜಿ.ಸಂ, ಜನಪದ, ಸತ್ಯಸಾದನ ಪಬ್ಲಿಕೇಶನ್ ಮೈಸೂರು, ೧೯೭೮
೨೮. ಪದ್ಮಪ್ರಸಾದ ಎಸ್.ಪಿ, ಜಾನಪದ ವರ್ಷ, ಕರ್ನಾಟಕ ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭

೨೯. ಬೋರಲಿಂಗಯ್ಯ.ಹಿ.ಚಿ, ಕಾಡುಕಾಂಕ್ರೇಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ ಸಾಗರ, ೧೯೯೫
೩೦. ಬಸವರಾಜ ಪೋಲೀಸ್ ಪಾಟೀಲ, ಜನಪದ ಕಥೆಗಳ ಸಂಗ್ರಹ, ಪ್ರಸಾರಾಂಗ ಗು.ವಿ.ವಿ.ಗುಲ್ಬರ್ಗಾ, ೨೦೦೫
೩೧. ರಮೇಶ್ ಸ.ಚಿ, ಉಪ್ಪಾರಮದುವೆ ಸಂಪ್ರದಾಯಗಳು, ಪ್ರಸಾರಾಮಗ ಕ.ವಿ.ವಿ. ಹಂಪಿ, ೧೯೯೪
೩೨. ರಮೇಶ್ ಸ.ಚಿ. ನೀರುಜಾನಪದ ನೋಟ, ಪ್ರಸಾರಾಂಗ ಕ.ವಿ.ವಿ. ಹಂಪಿ, ೨೦೦೫
೩೪. ರಮೇಶ್ ಸ.ಚಿ, ಅಲೆಮಾರಿಗಳ ಸ್ಥಿತಿಗತಿ, ಪ್ರಸಾರಾಂಗ ಕ.ವಿ.ವಿ. ಹಂಪಿ, ೨೦೦೫
೩೫. ರಮೇಶ್ ಸ.ಚಿ. ಬುನಾದಿ, ಅಂಶು ಪ್ರಕಾಶನ ಹೊಸಪೇಟೆ, ೨೦೦೫
೩೬. ರಂಗಸ್ವಾಮಿ ಡಿ.ಟಿ, ಭಾರತದ ಹಬ್ಬಗಳು, ಮನೋಹರ ಘಾಣೇಕರ ಧಾರವಾಡ,
೩೭ ರಾಮಚಂದ್ರ ಗೌಡ ಹಿ.ಶಿ, ಜಾನಪದ ಗ್ರಹಿಕೆ ಪರಿಕಲ್ಪನೆ ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ ಬೆಂಗಳೂರು, ೨೦೦೪
೩೮. ರಾಮಯ್ಯ ಕೋಟಗಾನಹಳ್ಳಿ, ಸಿಂದೂಮಾದಿಗರ ಸಂಸ್ಕೃತಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೩
೩೯. ರಾಮಚಂದ್ರಗೌಡ, ಜಾನಪದ ಸಾಂಸ್ಕೃತಿಕ ಆಯಾಮಗಳು, ಕನ್ನಡ ಪುಸ್ತಕ ಪ್ರಧಿಕಾರ ಬೆಂಗಳೂರು,೧೯೯೮
೪೦. ಲಕ್ಷ್ಮೀಪತಿ ಕೋಲಾರ, ಮಾಸ್ತಿಕರ ಸಂಸ್ಕೃತಿ, ಕರ್ನಾಟಕ ಅಕಾಡೆಮಿ ಬೆಂಗಳೂರು, ೧೯೯೩
೪೧. ವೀರಣ್ಣ ದಂಡೆ, ದೇಸೀ ದೃಷ್ಟಿ, ಕವಿರಾಜ ಪ್ರಕಾಶನ ಕಲ್ಬುರ್ಗಿ, ೨೦೦೧
೪೨. ವೆಂಕಟೇಶ್ ಇದ್ವಾಡಿ, ದೇವ–ದೇವಿ, ಪ್ರಸಾರಾಂಗ ಕ.ವಿ.ವಿ. ಹಂಪಿ, ೨೦೦೨
೪೩. ವೀರಣ್ಣ ದಂಡೆ, ದೇಸೀ, ಭಾಗ್ಯಶ್ರೀ ಎಂಟರ್ ಪ್ರೈಸಸ್ ಬೆಂಗಳೂರು, ೨೦೦೩.
೪೪. ಶಿವಕುಮಾರಸ್ವಾಮಿ, ಕರ್ನಾಟಕ ಜಾತ್ರೆಗಳು, ಕನ್ನಡ ವಿಭಾಗ ಸ್ನಾತಕೋತ್ತರಕೇಂದ್ರ ಮೈ.ವಿ.ವಿ.ಮೈಸೂರು, ೧೯೮೮
೪೫. ಹಿರೇಮಠ. ಎಸ್. ಎಸ್, ಜಾತ್ರೆಗಳು, ಮಮತಾ ಪ್ರಕಾಶನ ಹೊಸಪೇಟೆ, ೧೯೯೩
೪೬. ಹಿರೇಮಠ ಎಸ್.ಎಸ್. ಜನಪದ ಸಮಾಜ ಸಂಸ್ಕೃತಿ, ಸೂರ್ಯಪ್ರಕಾಶನ ಮಲ್ಲಾಡಿಹಳ್ಳಿ,



ತೇರು ಉತ್ಸವ



ಪಲ್ಲಕ್ಕಿ ಉತ್ಸವ

ಅರ್ಚಕನ ವಸತಿ ನಿಲಯ





ಪೆಮ್ಮಕ್ಕನ ಸಮುದಾಯ ಭವನ



ದೇವರಿಗೆ ಚಾಮರ ಬೀಸುವುದು



ಮರಿ ಬಸವ ತಾತನವರ ಗದ್ದುಗೆ ಸ್ಮಾರಕ



ಜಾತ್ರೆಯಲ್ಲಿ ಅನ್ನದ ದಾಸೋಹ



ಪೀರಗಟ್ಟೆಗುಡಿ

'ಸ್ಟೇಷನ್ ಮಾಸ್ತರ' ನಾಟಕದ ಒಂದು ದೃಶ್ಯ





ಖಾಕದ ಬಂಡಿ